# ಕೃತಜ್ಞತೆ

ಧರ್ಮಬಾಂಧವರೆ! ಮೈಸೂರಿನಲ್ಲಿ ಸ್ಥಾಪಿತವಾಗಿರುವ ಜೈನಸಾಹಿತ್ಯ ಪ್ರಚಾರಸಂಘವು ಕೆಲವೇ ತಿಂಗಳಲ್ಲಿ ಅತಿಮಹತ್ವವೆನಿಸಿದ ಪರಮಾಗಮ ಗ್ರಂಥಗಳನ್ನೂ ಸಾಹಿತ್ಯ ಗ್ರಂಥಗಳನ್ನೂ ಪ್ರಕಟಿಸಿರುತ್ತದೆ. ಈಗಾಗಲೇ ಯೋಗಾಮೃತ ಶತಕ (ಎರಡನೆಯ ಮುದ್ರಣ), ಸಾಮಾಯಿಕಪಾಠ (ಎರಡನೆಯ ಮುದ್ರಣ), ಪಂಚಸ್ತೋತ್ರ, ಯೋಗಸಾರ, ತತ್ತ್ವಾರ್ಥಸೂತ್ರ ಮೊದಲಾದ ಗ್ರಂಥಗಳನ್ನು ಪ್ರಕಟಿಸಿರುತ್ತದೆ. ಈ ಸಂಸ್ಥೆಯಲ್ಲಿ ನಮ್ಮ ಯಥಾಶಕ್ತಿಯಾಗಿ ಸೇವೆ ಸಲ್ಲಿಸಲು ಶ್ರೀಮಾನ್ **ಎಂ. ಸಿ. ಪದ್ಮನಾಭಶರ್ಮರನ್ನು** ಕೇಳಲಾಗಿ ಅವರು **ಯಶೋಧರ ಚರಿತ್ರೆಯನ್ನು** ಪ್ರಕಟಿಸಲು ಪ್ರೋತ್ಸಾಹವನ್ನು ಕೊಟ್ಟರು. ಇದಕ್ಕಾಗಿ ನಾನು ಚಿರ ಕೃತಜ್ಞನಾಗಿದ್ದೇನೆ. ಈ ಚರಿತ್ರೆಯಲ್ಲಿ ಅಹಿಂಸಾಧರ್ಮದ ಪ್ರತಿಪಾದನೆಯು ಪ್ರತಿಯೊಬ್ಬರಿಗೂ ಮುಂದಟ್ಟಾಗುವಂತೆ ಕವಿಯು ರಚಿಸಿರುತ್ತಾನೆ. ಅದೇ ರೀತಿ ಅವನ್ನು ಸುಲಭ ಶೈಲಿಯಲ್ಲಿ ಸರ್ವ ಸಾಮಾನ್ಯಜನರಿಗೆ ತಿಳಿಯುವಂತೆ ಶ್ರೀಮಾನ್ **ಬೊಮ್ಮರಸ ಪಂಡಿತರು** ಅನುವಾದಿಸಿದ್ದಾರೆ. ಇದಕ್ಕಾಗಿ ನಾನು ಕೃತಜ್ಞನಾಗಿದ್ದೇನೆ.

ದಿವಂಗತ ನಮ್ಮ ತೀರ್ಥರೂಪುರವರಾದ **ಕಡೆಮನೆ ಕಾಳಪ್ಪಗೌಡರವರ** ಮತ್ತು ಮಾತೋಶ್ರೀಯವರಾದ **ಪದ್ಮಾವತಮ್ಮನವರ** ಸ್ಮರಣಾರ್ಥವಾಗಿ ಈ **ಯಶೋಧರ ಚರಿತ್ರೆಯನ್ನು** ಅವರ ಪುತ್ರ **V. K. ವರ್ಧಮಾನಯ್ಯನಾದ** ನಾನು ಪ್ರಕಟಿಸಿ ಸಂಘಕ್ಕೆ ಒಪ್ಪಿಸಿರುತ್ತೇನೆ. ಸಂಘದವರು ಇದನ್ನು ಯೋಗ್ಯರೀತಿಯಲ್ಲಿ ಸಂರಕ್ಷಿಸಿ ಜೈನಾಗಮದ ಉತ್ತಮೋತ್ತಮ ಗ್ರಂಥಗಳನ್ನು ಪ್ರಕಟಿಸುತ್ತಲೂ ಸಂರಕ್ಷಿಸುತ್ತಲೂ ಪವಿತ್ರವಾದ ಧರ್ಮವನ್ನು ಕಾಪಾಡಬೇಕಾಗಿ ಅಪೇಕ್ಷಿಸುತ್ತೇನೆ.

ಸಮಾಜದ ಶ್ರೀಮಂತರು ಪ್ರತಿಯೊಬ್ಬರೂ ತಮ್ಮ ಅನುಕೂಲಕ್ಕೆ ತಕ್ಕಂತೆ ಯೋಗ್ಯವಾದ ಒಳ್ಳೆಯಗ್ರಂಥಗಳನ್ನು ಪ್ರಕಟಿಸುವುದು ಉತ್ತಮವಾದ ಕೆಲಸವೆಂದು ನಂಬುತ್ತೇನೆ. ದಕ್ಷಿಣ ಭಾರತದಲ್ಲಿ ಕನ್ನಡ ಮಹಾಕವಿಗಳು ಉತ್ತಮೋತ್ತಮ ಗ್ರಂಥಗಳನ್ನು ರಚಿಸಿ ಬಹಳಸೇವೆ ಸಲ್ಲಿಸಿರುತ್ತಾರೆ. ಆ ಗ್ರಂಥಗಳನ್ನು ರಕ್ಷಿಸುವುದು ಪ್ರಕಟಿಸುವುದು ಆದ್ಯಕರ್ತವ್ಯವೆಂದು ಭಾವಿಸುತ್ತೇನೆ.

ಈ ಸಂಘದ ಆಶ್ರಯದಲ್ಲಿ ಉತ್ತಮವಾದ ಸೇವೆ ಸಲ್ಲಿಸಲು ಉದಾತ್ತವಾದ ಸಲಹೆಯನ್ನುಕೊಟ್ಟ ಸಂಘದ ಕಾರ್ಯದರ್ಶಿಗಳಿಗೆ ಕೃತಜ್ಞನಾಗಿರುತ್ತೇನೆ,

**V. K. ವರ್ಧಮಾನಯ್ಯ**
ಕಡೇಮನೆ, ಮರದೂರು
ವೈ ನಾ ಡು

15–4–1951

# ಅಭಿನಂದನೆ

ಕನ್ನಡ ಕವಿಗಳಲ್ಲಿ ಕವಿಚಕ್ರವರ್ತಿಗಳೆನಿಸಿದ ಮೂವರಲ್ಲಿ ಜನ್ನನೂ ಒಬ್ಬನು. ಆತನು ರಚಿಸಿರುವ ಯಶೋಧರಕಾವ್ಯವು ಅತಿ ಚಿಕ್ಕದಾದರೂ ಪ್ರತಿಪಾದ್ಯ ವಿಷಯವು ಬಹಳ ಗಹನವಾದುದು. ಈತನ ಕಾವ್ಯದಲ್ಲಿ ಅಹಿಂಸಾಧರ್ಮವು ಚೆನ್ನಾಗಿ ಪ್ರತಿಪಾದಿಸಲ್ಪಟ್ಟಿದೆ. ಸಾಮಾನ್ಯವಾಗಿ ಜೈನ ಆಮ್ನಾಯ ಗ್ರಂಥಗಳಲ್ಲಿ ಜೀವಾತ್ಮರುಗಳಿಗೆ ಹಿತವನ್ನುಂಟುಮಾಡುವ ಅಹಿಂಸಾಧರ್ಮವನ್ನೂ ತತ್ತ್ವ ಸ್ವರೂಪವನ್ನೂ ಬೋಧಿಸಿರುತ್ತಾರೆ. ಜೈನ ಸಂಪ್ರದಾಯದಲ್ಲಿ ಜೀವದಯಾಷ್ಟಮಿ ಯೆಂಬುದು ಒಂದು ಮಹಾಪರ್ವವಾಗಿದೆ. ಆ ದಿವಸ ಜೈನರೆಲ್ಲರೂ ವ್ರತವನ್ನು ಕೈಕೊಂಡು ತಮ್ಮ ಶಕ್ತ್ಯಾನುಸಾರವಾಗಿ ದೇವರ ಪೂಜೆ, ಉಪವಾಸ, ಏಕಭುಕ್ತ ಗಳನ್ನುಮಾಡಿ ಕಥೆಯನ್ನು ಓದಿಸಿ ಕೇಳುವ ವಾಡಿಕೆಯು ನಡೆದುಕೊಂಡು ಬರು ತ್ತಿದೆ. ಈ ಗ್ರಂಥವನ್ನು ಓದಿ ಮನನಮಾಡುವುದರಿಂದ ಮನವಚನಕಾಯಗಳಿಂದ ಯಾವ ರೀತಿಯಲ್ಲೂ ಯಾವ ಪ್ರಾಣಿಯನ್ನೂ ಯಾವಾಗಲೂ ನೋಯಿಸಬಾರ ದೆಂಬ ವಿಷಯವು ಚೆನ್ನಾಗಿ ತಿಳಿಯುತ್ತದೆ. ಈ ಗ್ರಂಥವು ಹಲವಾರುವೇಳೆ ಪ್ರಕಟ ವಾಗಿದ್ದರೂ, ಗ್ರಂಥವು ಅತಿ ಮಹತ್ತ್ವದ್ದಾದುದರಿಂದ ಸಂಘದ ಆಶ್ರಯದಲ್ಲಿ ಸರ್ವರಿಗೂ ತಿಳಿಯುವಂತೆ ಹೊಸಗನ್ನಡದ ತಾತ್ಪರ್ಯದೊಡನೆ ಪ್ರಕಟಿಸಲಾಗಿದೆ.

ಯಶೋಧರ ಚರಿತ್ರೆಯನ್ನು ಸಂಶೋಧಿಸಿ ತಾತ್ಪರ್ಯವನ್ನು ಬರೆಯಲು ಶ್ರಮವಹಿಸಿದ ಶ್ರೀಮಾನ್ S. **ಬೊಮ್ಮರಸಪಂಡಿತರಿಗೆ** ಸಂಘವು ಚಿರಋಣಿ ಯಾಗಿದೆ. ಶ್ರೀಯುತರು ಬಹಳ ಶ್ರಮವಹಿಸಿ ಕಾರ್ಯವನ್ನು ಸುಂದರವಾಗಿಯೂ ಎಲ್ಲರಿಗೂ ತಿಳಿಯುವಂತೆಯೂ ಗ್ರಂಥವನ್ನು ಸಂಪಾದನೆಮಾಡಿರು ತ್ತಾರೆ. ಶ್ರೀಯುತರಿಂದ ಅನೇಕ ಉತ್ತಮವಾದ ಗ್ರಂಥಗಳು ಹೊರಬೀಳಲಿವೆ. ಶ್ರೀಯುತರು ಸಂಘದ ವಿಷಯದಲ್ಲಿ ಬಹಳ ಅಭಿಮಾನವಿಟ್ಟು ಸಂಘದ ಆಶ್ರಯ ದಲ್ಲಿ ಮುದ್ರಣವಾಗುವ ಎಲ್ಲಾ ಗ್ರಂಥಗಳನ್ನೂ ಸರಿಪಡಿಸಿಕೊಡುವುದು, ಪ್ರೂಫ್ ಓದುವುದು ಮೊದಲಾದ ಎಲ್ಲಾ ಕಾರ್ಯಗಳನ್ನೂ ಮಾಡಿಕೊಡುತ್ತ ಬಹಳ ಸಹಾಯ ವನ್ನು ನೀಡುತ್ತಿದ್ದಾರೆ. ಸಂಘದ ಸದಸ್ಯರುಗಳಲ್ಲಿ ಇವರ ಸೇವೆಯು ಚಿರಸ್ಮರ ಣೀಯವಾದುದಾಗಿದೆ. ಇದಕ್ಕಾಗಿ ಸಂಘವು ತನ್ನ ಕೃತಜ್ಞತೆಯನ್ನು ಮತ್ತೊಮ್ಮೆ ವ್ಯಕ್ತಪಡಿಸುತ್ತದೆ.

ಯಶೋಧರಕಾವ್ಯವನ್ನು ಪ್ರಕಟಿಸಲು ವೈನಾಡು ತಾಲ್ಲೂಕು ಮರದೂರು ಕಡೇಮನೆ ಶ್ರೀಮಾನ್ **ವರ್ಧಮಾನಯ್ಯನವರು** ಒಪ್ಪಿ ಪ್ರಕಾಶಪಡಿಸಿರುತ್ತಾರೆ. ಶ್ರೀಯುತರು ಅತ್ಯಂತಧರ್ಮಪ್ರೇಮಿಗಳೂ ಉದಾರಿಗಳೂ ಆಗಿರುತ್ತಾರೆ. ಇವರು ಇನ್ನೂ ಅನೇಕ ಧಾರ್ಮಿಕಕಾರ್ಯಗಳನ್ನು ಕೈಗೊಂಡಿದ್ದಾರೆ. ಇದಲ್ಲದೆ ಅನೇಕ ಧರ್ಮಾತ್ಮರನ್ನು ಪ್ರೋತ್ಸಾಹಿಸಿ ಇನ್ನೂ ಅನೇಕ ಮಹತ್ವಪೂರಿತವಾದ ಗ್ರಂಥ ಗಳನ್ನು ಹೊರಕ್ಕೆತರಲು ಉದ್ಯುಕ್ತರಾಗಿರುತ್ತಾರೆ. ಶ್ರೀ **ವರ್ಧಮಾನಯ್ಯನವರು**

ಕೇವಲ ವಯಸ್ಸಿನಲ್ಲಿ ಚಿಕ್ಕವರಾದರೂ ಧಾರ್ಮಿಕಗುಣದಿಂದ ಬಹಳ ಉನ್ನತವಮಟ್ಟ ದಲ್ಲಿರುತ್ತಾರೆ. ಧಾರ್ಮಿಕಗುಣವು ಸ್ವಯಂ ಆತ್ಮನಲ್ಲಿ ಉದ್ಭವಿಸುವುದರಿಂದ ಅತಿ ಮಹತ್ವವಾದ ಫಲವನ್ನು ಅತಿಶೀಘ್ರದಲ್ಲೇ ಕೊಡುವುದಾಗುತ್ತದೆ. ಧಾರ್ಮಿಕಗುಣವು ಶಾಸ್ತ್ರವನ್ನು ಅಧ್ಯಯನಮಾಡುವುದರಿಂದಲೂ, ಧರ್ಮೋಪದೇಶವನ್ನು ಕೇಳುವುದ ರಿಂದಲೂ ಕರ್ಮವು ಉಪಶಮಕ್ಕೆಬರುವುದರಿಂದಲೂ ಉಂಟಾಗುತ್ತದೆ. ಧಾರ್ಮಿಕ ಶ್ರೀಮಂತರು ಇವರಂತೆಯೇ ತಮ್ಮ ಅಮೂಲ್ಯವಾದ ಧನವನ್ನು ಸದ್ವಿನಿಯೋಗ ಮಾಡಿ ಜೈನಸಾಹಿತ್ಯಗ್ರಂಥಗಳನ್ನು ಪ್ರಕಾಶಪಡಿಸುವುದರಿಂದ ಜೈನಧರ್ಮ ಪ್ರಭಾವನೆಮಾಡಿದಂತಾಗುತ್ತದೆ. ಶ್ರೀಯುತ **ವರ್ಧಮಾನಯ್ಯನವರು** ಯಶೋ ಧರ ಚರಿತ್ರೆಯನ್ನು ಪ್ರಕಟಿಸಲು ಸಹಾಯಮಾಡಿ ತಮ್ಮ ಉದಾತ್ತಗುಣವನ್ನು ವ್ಯಕ್ತಪಡಿಸಿ ಮಹತ್ತರವಾದ ಸೇವೆಸಲ್ಲಿಸಿದ್ದಕ್ಕಾಗಿ ಸಂಘವು ಅವರಿಗೆ ಚಿರರುಣಿ ಯಾಗಿದೆ. ಮತ್ತು ಈ ಗ್ರಂಥಪ್ರಕಾಶನಕ್ಕೆ ಪ್ರೋತ್ಸಾಹವನ್ನು ಇತ್ತ ವೈನಾಡಿನ ಶ್ರೀಮಾನ್ **K. ನಾಗರಾಜಯ್ಯನವರಿಗೆ** ಸಂಘದ ಅಭಿನಂದನೆಗಳು. ಶ್ರೀಯುತ **ನಾಗರಾಜಯ್ಯನವರು** ತಮ್ಮ ಅಮೂಲ್ಯವಾದ ಸಮಯವನ್ನು ಸಂಘದ ಸೇವೆಗಾಗಿ ಸಲ್ಲಿಸುತ್ತಿದ್ದಾರೆ. ಇದಕ್ಕಾಗಿ ಅವರಿಗೂ ಸಂಘವು ಚಿರರುಣಿ ಯಾಗಿದೆ.

ಈ ಗ್ರಂಥದ ಸಂಶೋಧನಕಾರ್ಯದಲ್ಲಿ ಮದರಾಸ್ ಯೂನಿವರ್ಸಿಟಿಯ ರಿಟೈರ್ಡ್ ಕನ್ನಡಲೆಕ್ಚರರಾದ ಶ್ರೀಮಾನ್ **H. ಶೇಷಯ್ಯಂಗಾರ್ಯರವರು** ಸಹಾಯ ಮಾಡಿದ್ದಾರೆ. ಶ್ರೀಯುತರು ತಾವು ಸಂಶೋಧಿಸಿ ತಯಾರಿಸಿದ್ದ ಅನೇಕ ಗ್ರಂಥಗಳನ್ನು ನಮ್ಮ ಸಂಘಕ್ಕೆ ದಯಪಾಲಿಸಿರುತ್ತಾರೆ. ಇದಲ್ಲದೆ ಜೈನಪುರಾಣಗಳಾದ ಶಾಂತಿ ಪುರಾಣ, ಪುಷ್ಪದಂತಪುರಾಣ ಮೊದಲಾದ ಅನೇಕ ಉತ್ತಮಗ್ರಂಥಗಳನ್ನು ಮುದ್ರಿ ಸಿರುತ್ತಾರೆ. ಜೈನಸಮಾಜಕ್ಕೆ ಇವರ ಸೇವೆ ಬಹಳ ಅಮೂಲ್ಯವಾದುದೂ ಚಿರಸ್ಮರ ಣೀಯವಾದುದೂ ಆಗಿದೆ. ಆದುದರಿಂದ ಶ್ರೀಮಾನ್ **H. ಶೇಷಯ್ಯಂಗಾರ್ಯರ ವರಿಗೆ** ನಮ್ಮ ವಂದನೆಗಳು.

ಈ ಗ್ರಂಥಪ್ರಕಟನೆಗೆಅನೇಕ ವಿಧದಿಂದ ಸಹಾಯನೀಡಿದ ಮಹನೀಯರು ಗಳನ್ನು ಅಭಿನಂದಿಸುತ್ತೇವೆ. ಸಕಾಲದಲ್ಲಿ ಅಂದವಾಗಿ ಮುದ್ರಿಸಿಕೊಟ್ಟ ಶ್ರೀಮಾನ್ **ಟಿ. ಸಿ. ಬ್ರಹ್ಮಸೂರಯ್ಯನವರಿಗೂ** ಅಭಿನಂದನೆಗಳು.

15–4–1951
ವೈಸೂರು

ಸಂಘದ ಪರವಾಗಿ
**ಯಂ. ಸಿ. ಪದ್ಮನಾಭಶರ್ಮ**
ಕಾರ್ಯದರ್ಶಿ
**ಜೈನಸಾಹಿತ್ಯ ಪ್ರಚಾರಸಂಘ**

# ಸಂಪಾದಕನ ಮಾತು

ಜನ್ನಮಹಾಕವಿರಚಿತವಾದ ಯಶೋಧರಚರಿತ್ರೆಯು ಮೊದಲು ಚಾಮರಾಜನಗರದ ಶ್ರೀಮಾನ್ ಪದ್ಮರಾಜಪಂಡಿತರಿಂದ ಮುದ್ರಿತವಾಯಿತು. ಅದೇ ಗ್ರಂಥವು ಎರಡನೆಯಸಾರಿ ಮೈಸೂರಿನ ಕಾವ್ಯಕಲಾನಿಧಿ ಗ್ರಂಥಮಾಲೆಯಲ್ಲಿ ಪ್ರಕಟವಾಯಿತು. ಈಚೆಗೆ 1941 ರಲ್ಲಿ ಈ ಯಶೋಧರ ಚರಿತ್ರೆಯ ಸಂಗ್ರಹವೊಂದು ಮೈಸೂರು ಯೂನಿವರ್ಸಿಟಿ ಗ್ರಂಥಮಾಲೆಯಲ್ಲಿ ಮೂರನೆಯಸಾರಿ ಮುದ್ರಿಸಲ್ಪಟ್ಟಿತು. ಈಗ ನಾಲ್ಕನೆಯಸಾರಿ ಮೈಸೂರಿನ ಜೈನಸಾಹಿತ್ಯ ಪ್ರಚಾರಸಂಘದ ಸನ್ಮತಿ ಗ್ರಂಥಮಾಲೆಯಲ್ಲಿ ಪ್ರಕಟವಾಗಲಿದೆ. ಇದು ಹಳೆಗನ್ನಡ ಗ್ರಂಥವಾದುದರಿಂದ ಹಳೆಗನ್ನಡ ಪರಿಚಯವಿಲ್ಲದ ಸಾಮಾನ್ಯರಿಗೆ ಪದ್ಯಗಳು ಸುಲಭವಾಗಿ ಅರ್ಥವಾಗುವುದಿಲ್ಲವೆಂಬುದರಮೇಲೆ ಪದ್ಯಗಳಿಗೆ ಹೊಸಗನ್ನಡಗದ್ಯರೂಪವಾದ ತಾತ್ಪರ್ಯವನ್ನು ಬರೆದು ಮುದ್ರಿಸಲಾಗಿದೆ.

## ಕವಿಚರಿತ್ರೆ

ಈ ಗ್ರಂಥವು ಈಗಾಗಲೇ ಮೂರುಸಾರಿ ಅಚ್ಚಾಗಿರುವುದರಿಂದ ಕವಿಯ ವಿಷಯವಾಗಿ ಹೆಚ್ಚೇನೂ ಬರೆಯಬೇಕಾದ ಆವಶ್ಯಕತೆಯಿಲ್ಲ. ಕನ್ನಡ ಕವಿಗಳಲ್ಲಿ ಕವಿಚಕ್ರವರ್ತಿಗಳೆಂದು ಬಿರುಮಪಡೆದಿದ್ದ ಮೂರುಜನರಲ್ಲಿ ಈ ಗ್ರಂಥಕರ್ತ ಜನ್ನನೂ ಒಬ್ಬನು. ಈತನು ಯಶೋಧರಚರಿತೆಯನ್ನು ಶಕ 1131 (ಕ್ರಿ. ಶ. 1209) ರಲ್ಲಿ ಬರೆದಿರುವನು. ಈತನ ಇನ್ನೊಂದು ಗ್ರಂಥವಾದ ಅನಂತನಾಥಪುರಾಣವನ್ನು ಶಕ 1152 (ಕ್ರಿ. ಶ. 1230) ರಲ್ಲಿ ಬರೆದಿರುವನು; ಮತ್ತು ಚನ್ನರಾಯಪಟ್ಟಣ, ತರೀಕೆರೆಯೆಂಬ ಸ್ಥಳಗಳಲ್ಲಿ ತಾಮ್ರ ಶಾಸನಗಳನ್ನು ಬರೆದುಕೊಟ್ಟುದಾಗಿ ಆ ಶಾಸನಗಳಲ್ಲೇ ಹೇಳಿಕೊಂಡಿರುವನು. ಈತನು ಮೇಲೆ ಹೇಳಿದಂತೆ ಕವಿಚಕ್ರವರ್ತಿಯೆಂಬ ಬಿರುದನ್ನು ವೀರಬಲ್ಲಾಳರಾಜನಿಂದ ಪಡೆದುದಲ್ಲದೆ ಅವನಲ್ಲಿಯೇ ಮಂತ್ರಿಯೂ ದಂಡಾಧೀಶನೂ ಆಗಿದ್ದಂತೆ ಈ ಗ್ರಂಥಗಳಲ್ಲಿನ ಪದ್ಯಗಳಿಂದಲೇ ಗೊತ್ತಾಗುತ್ತದೆ. ಈತನು ತನ್ನ ಹೆಸರನ್ನು ಜನ್ನ, ಜನ್ನಿಗ, ಜನ್ನಮಯ್ಯ, ಜನಾರ್ದನದೇವ ಜಾನಕಿ ಎಂದು ಮುಂತಾಗಿ ಹೇಳಿಕೊಂಡಿರುವನು. ಈತನು ತನ್ನ ಗ್ರಂಥಗಳಲ್ಲಿಯೂ ತಾಮ್ರ ಶಾಸನಗಳಲ್ಲಿಯೂ ತನ್ನನ್ನು "ಉದ್ದಂಡಕವಿ," "ಕವಿ ಭಾಳಲೋಚನ," "ಸುಕಜನಮಿತ್ರ" ಮತ್ತು "ಅಸಹಾಯಸುಕವಿ" ಎಂದೂ ಹೊಗಳಿಕೊಂಡಿರುವನು. ಈತನು ಒಳ್ಳೆಯ ಉದ್ದಂಡಕವಿ. ತನ್ನ ಕವಿತಾಸಾಮರ್ಥ್ಯಕ್ಕೆ ಮೆಚ್ಚಿಕೊಂಡು ಹಾಗೆ ಹೊಗಳಿಕೊಂಡಿರುವುದೇನೂ ಆಶ್ಚರ್ಯವಲ್ಲ. ಈತನ ಕನ್ನಡದಲ್ಲಿಯೂ, ಸಂಸ್ಕೃತದಲ್ಲಿಯೂ ಗ್ರಂಥಗಳನ್ನು ಬರೆಯುವ ಶಕ್ತಿಯುಳ್ಳವನಾಗಿದ್ದುದರಿಂದ ತನ್ನನ್ನು ಚತುರ್ವಿಧಪಂಡಿತನೆಂದು ಹೇಳಿರುವನು. ಈತನು ಕನ್ನಡ

ಸಂಸ್ಕೃತ ಪಂಡಿತನಾಗಿದ್ದುದಲ್ಲದೆ ಭರತ ಸುರತ ಸಂಗೀತಶಾಸ್ತ್ರಗಳಲ್ಲಿಯೂ ಪಂಡಿತ ನಾಗಿದ್ದನೆಂದೂ ಹೇಳಿಕೊಂಡಿರುವನು.

ಈತನು ತನ್ನ ಅನಂತನಾಥಪುರಾಣದಲ್ಲಿ ತನಗಿಂತ ಮೊದಲಿದ್ದ ಕವಿಗಳಾದ ಪಂಪ, ಪೊನ್ನ, ಗುಣವರ್ಮ, ನಾಗವರ್ಮ, ರನ್ನ, ನಾಗಚಂದ್ರ, ಅಗ್ಗಳ, ನೇಮಿ ಮತ್ತು ಪುಷ್ಪಬಾಣ ಇವರುಗಳನ್ನು ಹೊಗಳಿದ್ದಾನೆ. ಇವನನ್ನು ಪ್ರಾಯಿಕವಾಗಿ ಈಚಿನ ಎಲ್ಲಾ ಜೈನಕವಿಗಳೂ, ಜೈನೇತರಕವಿಗಳಲ್ಲಿಕೆಲವರೂ ಹೊಗಳಿದ್ದಾರೆ. ಈತನು ತನ್ನ ಯಶೋಧರ ಚರಿತ್ರೆಯಲ್ಲಿ ತನಗಿಂತ ಹಿಂದೆ ಈ ಕಥೆಯನ್ನು ಪ್ರಾಕೃತ ಸಂ ಸ್ಕೃತ ಮತ್ತು ಕನ್ನಡದಲ್ಲಿ ಬರೆದಿರುವ ಎಲ್ಲಾ ಕವಿಗಳನ್ನೂ ಸ್ಮರಿಸಿರುವನು. ಇವನಿ ಗಿಂತ ಮೊದಲು ಹುಟ್ಟಿದ್ದ ಪ್ರಾಕೃತ ಸಂಸ್ಕೃತ ಗ್ರಂಥಗಳು ದೊರಕಿರುವುವೇವಿನಾ ಯಾವ ಕನ್ನಡ ಗ್ರಂಥವೂ ಈವರೆಗೆ ಉಪಲಭ್ಯವಾಗಿಲ್ಲ.

ಜನ್ನನು ಒಬ್ಬ ಮಹಾಕವಿ. ಅದರಲ್ಲಾವ ಸಂಶಯವೂ ಇಲ್ಲ. ಈತನ ಕವಿತಾ ಶಕ್ತಿಯ ವಿಚಾರವಾಗಿ ಕವಿಚರಿತ್ರಕಾರರು "ಈತನ ಬಂಧವು ಲಲಿತವಾಗಿಯೂ, ಮಧುರವಾಗಿಯೂ, ಗಂಭೀರವಾಗಿಯೂ, ಹೃದಯಂಗಮವಾಗಿಯೂ ಇದೆ. ಈತ ನನ್ನು ಮಧುರನು 'ಜನ್ನನು ಕರ್ಣಾಟಕ ಕವಿತೆಗೆ ಸೀಮಾಪುರುಷಂ' ಎಂದು ಹೇಳಿರುವುದು ಉಚಿತವಾಗಿ ಕಾಣುತ್ತದೆ" ಎಂದು ಬರೆದಿರುವರು. ಈತನ ಎರಡು ಗ್ರಂಥಗಳೂ ಮುದ್ರಿತವಾಗಿ ಕನ್ನಡಿಗರೆಲ್ಲರಿಗೂ ಪರಿಚಯವಾಗಿರುವುದರಿಂದ ಕವಿಯ ಸಾಮರ್ಥ್ಯದ ವಿಚಾರವಾಗಿ ಹೆಚ್ಚಿಗೆ ಹೇಳಬೇಕಾದ ಪ್ರಕೃತವಿಲ್ಲವೆಂದು ತೋರುತ್ತದೆ.

## ಗ್ರಂಥ

ಈ ಯಶೋಧರಚರಿತ್ರೆಯು ಒಂದು ವರ್ಣಕಗ್ರಂಥ. ಇದರಲ್ಲಿ ಚಂಪೂಗ್ರಂಥ ಗಳಲ್ಲಿರುವಂತೆ ಹೆಚ್ಚು ವೃತ್ತಗಳಾಗಲೀ ವಚನಗಳಾಗಲೀ ಇಲ್ಲ. ಅಧ್ಯಾಯಗಳ ಕೊನೆಯಲ್ಲಿಮಾತ್ರ ಎರಡೆರಡು ವೃತ್ತಗಳಿವೆ. ಇದರಲ್ಲಿ 311 ಪದ್ಯಗಳಿವೆ. ಇವುಗ ಳಲ್ಲಿ 10 ವೃತ್ತಗಳು; ಉಳಿದುವೆಲ್ಲಾ ಕಂದಗಳೇ. ಈ ವಿಧವಾದ ಕಂದಗಳೇ ಇರುವ ಗ್ರಂಥಗಳಲ್ಲಿ ಇದೇ ಮೊದಲನೆಯದೆಂದು ಕಾಣುತ್ತದೆ.

ಈ ಯಶೋಧರ ಚರಿತ್ರೆಯು ಎಷ್ಟು ಪುರಾತನವಾದುದೆಂದು ಹೇಳಲು ಬರು ವುದಿಲ್ಲ. ಎಂಟನೆಯ ಶತಮಾನಕ್ಕಿಂತ ಮುಂಚೆ ಇದ್ದ ಪ್ರಭಂಜನನೆಂಬುವವನು ಒಂದು ಯಶೋಧರ ಚರಿತ್ರೆಯನ್ನು ಬರೆದಿರುವನೆಂದು, ಉದ್ಯೋತನೆಂಬುವನ, ಕ್ರಿ. ಶ. 777 ರಲ್ಲಿ ಬರೆಯಲ್ಪಟ್ಟಿರುವ, ಕುವಲಯಮಾಲಾ ಎಂಬ ಗ್ರಂಥದಲ್ಲಿ ಹೇಳಿ ದೆಯಂತೆ. ಎಂಟನೆಯ ಶತಮಾನದಲ್ಲಿದ್ದ ಹರಿಭದ್ರನೆಂಬುವನ ಪ್ರಾಕೃತದ 'ಸಮ ರಾಯಿಚ್ಚಕಹಾ' ಎಂಬ ಗ್ರಂಥದಲ್ಲಿ ಯಶೋಧರನ ಕಥೆಯ ಉಲ್ಲೇಖವಿದೆ ಎಂದು

ಗೊತ್ತಾಗುತ್ತದೆ. ಆದುದರಿಂದೀಕಥೆಯು ಎಂಟನೆಯ ಶತಮಾನಕ್ಕಿಂತ ಮುಂಚೆಯೇ ಪ್ರಚಲಿತವಾಗಿದ್ದಿತೆಂದು ಹೇಳಬಹುದಾಗಿದೆ. ಹರಿಭದ್ರನ ಗ್ರಂಥದಲ್ಲೇ ನಾವು ಮೊಟ್ಟ ಮೊದಲು ಯಶೋಧರ ಚರಿತ್ರೆಯನ್ನು ನೋಡಲಾಗುವುದು.

ಇದೇ ಯಶೋಧರ ಚರಿತ್ರೆಯನ್ನು ಸೋಮದೇವಸೂರಿಯೆಂಬುವನು ಶಕ 881 (ಕ್ರಿ. ಶ. 959) ರಲ್ಲಿ 'ಯಶಸ್ತಿಲಕ' ವೆಂಬ ಹೆಸರಿನಿಂದ ಎಂಟು ಅಧ್ಯಾಯಗಳುಳ್ಳ ಒಂದು ದೊಡ್ಡ ಸಂಸ್ಕೃತ ಚಂಪೂಗ್ರಂಥವನ್ನು ಬರೆದಿರುವನು. ಈ ಸೋಮದೇವಸೂರಿಯ ಸಮಕಾಲಿಕನಾದ ಪುಷ್ಪದಂತನೆಂಬುವನು 'ಜಸಹರಚರಿವು' ಎಂಬ ಹೆಸರಿನಿಂದ ಈ ಕಥೆಯನ್ನು ಬರೆದಿರುವನು. ಇವನು ಒಂದು ತ್ರಿಷಷ್ಠಿಶಲಾಕಾ ಪುರುಷರ ಕಥೆಯನ್ನೂ ಬರೆದಿರುವನಂತೆ.

ಈಚೆಗೆ ಕ್ರಿ. ಶ. 1025 ರಲ್ಲಿ ವಾದಿರಾಜನೆಂಬುವನು ಇದೇ ಕಥೆಯನ್ನು ನಾಲ್ಕು ಅಧ್ಯಾಯಗಳಲ್ಲಿ, ಸಂಸ್ಕೃತವಲ್ಲಿ ಬರೆದಿರುವನು. ಇವನು ಒಂದು ಪಾರ್ಶ್ವನಾಥಚರಿತ್ರೆಯನ್ನೂ ಸಂಸ್ಕೃತದಲ್ಲಿ ಬರೆದಿರುವನು. ಈ ವಾದಿರಾಜನ ಬಳಿಕ ವಾಸವಸೇನನೆಂಬುವನು ಎಂಟು ಅಧ್ಯಾಯಗಳ ಸಂಸ್ಕೃತಗ್ರಂಥವನ್ನು ಬರೆದಿರುವನು. ವತ್ಸರಾಜನೆಂಬುವನೂ ಈ ಕಥೆಯನ್ನು ಬರೆದಿರುವನು. ಜನ್ನನಿಂದೀಚೆಗೆ ಕ್ಷಮಾಕಲ್ಯಾಣನೆಂಬುವನು 18 ನೆಯ ಶತಮಾನದಲ್ಲಿ ಈ ಕಥೆಯನ್ನು ಸಂಸ್ಕೃತ ಗದ್ಯದಲ್ಲಿ ಬರೆದಿರುವನು. ಇದೇ ಕಥೆಯನ್ನಿಬ್ಬರು ಕನ್ನಡ ಕವಿಗಳು ಷಟ್ಪದೀರೂಪದಲ್ಲಿ ಬರೆದಿರುವರು. ಈ ಕಥೆಯು ಬಹಳ ಜನಾದರಕ್ಕೆ ಪಾತ್ರವಾಗಿದ್ದುದರಿಂದ ಈಚೆಗೆ ಗುಜರಾತಿ, ಹಿಂದಿ, ತಮಿಳು ಮೊದಲಾದ ಭಾಷೆಗಳಲ್ಲಿಯೂ ಬರೆಯಲ್ಪಟ್ಟಿದೆ. ಹೀಗೆ ಈ ಯಶೋಧರನ ಕಥೆಯು ಅನೇಕ ಕವಿಗಳಿಂದ ಹಲವು ಭಾಷೆಗಳಲ್ಲಿ ಬರೆಯಲ್ಪಟ್ಟಿದೆ.

ಜನ್ನನು ತನ್ನ ಯಶೋಧರಚರಿತ್ರೆಯನ್ನು ಮೇಲೆ ಹೇಳಿದ ವಾದಿರಾಜನ ಗ್ರಂಥದ ಆಧಾರದಮೇಲೆಯೇ ಬರೆದಿರುವಂತೆ ಕಾಣುತ್ತದೆ. ಜನ್ನನ ಗ್ರಂಥವು, ಅಧ್ಯಾಯಗಳ ವಿಭಾಗ, ಕಥಾಸರಣಿ, ವಿಷಯನಿರೂಪಣೆ ಇವೆಲ್ಲದರಲ್ಲಿಯೂ ವಾದಿರಾಜನ ಗ್ರಂಥದ ಅಚ್ಚೊತ್ತಿದಂತಿದೆ. ಉದಾಹರಣೆಯಾಗಿ ಕೆಲವು ಹೋಲಿಕೆಯ ಪದ್ಯಗಳನ್ನು ಕೊನೆಯಲ್ಲಿ ಕೊಟ್ಟಿರುತ್ತೇವೆ.

ಜನ್ನನು ವಾದಿರಾಜನ ಗ್ರಂಥವನ್ನನುಸರಿಸಿ ಬರೆದಿದ್ದರೂ ತನ್ನ ಪ್ರತಿಭಾವಿಶೇಷದಿಂದ ಬಹಳ ಮನೋಹರವಾಗಿ ಚಿತ್ರಿಸಿದ್ದಾನೆ. ಇದು ಆ ಎರಡರ ಹೋಲಿಕೆಯಿಂದ ಗೊತ್ತಾಗುತ್ತದೆ. ಈ ಗ್ರಂಥದಲ್ಲಿ ಅಲಂಕಾರವಿಲ್ಲದ ಪದ್ಯಗಳು ಬಹಳ ಕಡಿಮೆ; ಪದ್ಯಗಳೆಲ್ಲವೂ ಉತ್ತಮವಾದ ಅಲಂಕಾರಗಳಿಂದ ಕೂಡಿವೆ.

ಯಶಸ್ತಿಲಕ ಚಂಪುವನ್ನು ಬರೆದಿರುವ ಸೋಮದೇವಸೂರಿಯು ತನ್ನ ಗ್ರಂಥಾರಂಭದಲ್ಲಿ ಮುನಿ ಸುವ್ರತತೀರ್ಥಂಕರನನ್ನು ಸ್ತುತಿಸಿ ಬಳಿಕ ಪಂಚಪರಮೇಷ್ಠಿ

ಗಳನ್ನು ಸ್ತೋತ್ರವಮಾಡಿ ಕಥೆಯನ್ನಾರಂಭಿಸಿರುವನು.

ವಾದಿರಾಜನೂ ತನ್ನ ಗ್ರಂಥದಲ್ಲಿ ಮುನಿಸುವ್ರತತೀರ್ಥಂಕರರನ್ನೂ ಬಳಿಕ ಪಂಚಪರಮೇಷ್ಠಿಗಳನ್ನೂ ಸ್ತುತಿಸಿ ಬಳಿಕ ಸಮಂತಭದ್ರಾದಿಮುನಿಗಳನ್ನು ಸ್ತೋತ್ರ ಮಾಡಿ ಗ್ರಂಥವನ್ನಾರಂಭಿಸಿರುವನು. ಜನ್ನನೂ ಸಹ ಮೊದಲು ಮುನಿಸುವ್ರತ ಜಿನೇಂದ್ರರನ್ನೂ ಬಳಿಕ ಪಂಚಪರಮೇಷ್ಠಿಗಳನ್ನೂ ಸ್ತುತಿಸಿರುವನು. ಅನಂತರ ವೀರ ಸೇನಾಚಾರ್ಯ, ಜಿನಸೇನಾಚಾರ್ಯ, ಸಿಂಹನಂದ್ಯಾಚಾರ್ಯ, ಕುಂಡಕುಂದಾ ಚಾರ್ಯ, ಸಮಂತಭದ್ರಾಚಾರ್ಯ, ಪೂಜ್ಯಪಾದ ಮುಂತಾದ ಆಚಾರ್ಯರನ್ನು ಸ್ತೋತ್ರಮಾಡಿ, ತನ್ನೊಡೆಯನಾದ ವೀರಬಲ್ಲಾಳನ ವಂಶವರ್ಣನೆಯನ್ನುಮಾಡಿ ಗ್ರಂಥಾರಂಭಮಾಡಿರುವನು.

ಜನ್ನನು ತನ್ನ ಗ್ರಂಥವನ್ನು ಬರೆದ ಸಂದರ್ಭವನ್ನು ಕುರಿತು ಹೀಗೆ ಹೇಳಿ ದ್ದಾನೆ.

ಶ್ರಾವಕಜನದುಪವಾಸಂ ।
ಜೀವದಯಾಷ್ಟಮಿಯೊಳಾಗೆ ಪಾರಣೆ ಕಿವಿ ॥
ಗ್ಗೀವಸ್ತುಕಥನದಿಂದು ।
ದ್ಭಾವಿಸೆ ಕವಿಭಾಳಲೋಚನಂ ವಿರಚಿಸಿದಂ ॥

ಜೀವದಯಾಷ್ಟಮಿಯನೋಂಪಿಯೆಂದೊಂದು ವ್ರತವು ಜೈನರಲ್ಲಾಚರಣೆಯ ಲ್ಲಿದೆ. ಆ ವ್ರತದ ವಿಧಾನ ಮೊದಲಾದುವನ್ನು ಹೇಳುವ ಕಥೆಯಲ್ಲಿ ವ್ರತಮಾಡುವ ವರು ಆಶ್ವಯುಜಮಾಸದ ಶುಕ್ಲಪಕ್ಷದ ಅಷ್ಟಮಿಯಲ್ಲಿ ಉಪವಾಸವಿದ್ದು, ಜಿನೇಶ್ವ ರನನ್ನು ಭಕ್ತಿಯಿಂದ ಪೂಜಿಸಿ, ಮರುದಿನ ಪಾರಣೆಮಾಡುವುದು ಎಂದಿದೆ. ವ್ರತ ವಿಧಾನವನ್ನು ಹೇಳಿದ ಬಳಿಕ ಪ್ರಾಣಿಹಿಂಸೆಯಿಂದುಟಾಗುವ ಪಾಪದಫಲಗಳನ್ನು ಹೇಳುವಾಗ, ಒಂದು ಸಂಕಲ್ಪಹಿಂಸೆಮಾಡಿದುದಕ್ಕೇ ಉಂಟಾದ ದುಷ್ಫಲಗಳನ್ನು ವರ್ಣಿಸುವ ಈ ಯಶೋಧರನ ಕಥೆಯು ಉದಾಹರಣೆಯಾಗಿ ಹೇಳಲ್ಪಟ್ಟಿದೆ. ಈ ನೋಂಪಿಯ ಕಥೆಯಆರಂಭದಲ್ಲಿ "ಮುನಿಸುವ್ರತತೀರ್ಥಂಕರರು ನಮ್ಮನ್ನು ಸಂರಕ್ಷಿ ಸಲಿ"ಎಂದು ಹೇಳುವುದರಿಂದಾವ್ರತವು ಆ ತೀರ್ಥಂಕರರ ಕಾಲದಿಂದೀಚೆಗೆ ಆಚರಣೆಗೆ ಬಂದಿರಬೇಕೆಂದೂ, ಆ ವ್ರತದಲ್ಲಿ ಹೇಳುವ ಕಥೆಯೇ ಈ ಗ್ರಂಥರೂಪದಲ್ಲಿ ಬರೆಯ ಲ್ಪಟ್ಟಿರಬೇಕೆಂದೂ ಊಹಿಸಬೇಕಾಗುತ್ತದೆ. ಜನ್ನನೂ ಜೀವದಯಾಷ್ಟಮಿಯ ಉಪ ವಾಸದ ಪಾರಣೆಯರೂಪವಾಗಿ ಈ ಕಥೆಯನ್ನು ಬರೆದನೆಂದು ಹೇಳುತ್ತಾನೆ.

ಈ ಗ್ರಂಥಕ್ಕೆ ಮೂಲಾಧಾರವಾವುದೋ ಹೇಳಲಾಗುವುದಿಲ್ಲ. ವಾದಿರಾಜನ ಗ್ರಂಥದ ಪ್ರಕಾಶಕರೂ, ಜನ್ನನ ಗ್ರಂಥವನ್ನು ವಿಮರ್ಶೆಮಾಡಿರುವವರೂ ಈ ಕಥೆಗೆ ಗುಣಭದ್ರಾಚಾರ್ಯರ ಉತ್ತರಪುರಾಣದಲ್ಲಿ ಮುನಿಸುವ್ರತತೀರ್ಥಂಕರಪುರಾಣದ

ಲ್ಲಿರುವ ಕಥೆಯೇ ಮೂಲಾಧಾರವೆಂದು ಬರೆದಿರುತ್ತಾರೆ. ಆದರೆ ಮುದ್ರಣವಾಗಿ ಈಗ ಪ್ರಚಾರದಲ್ಲಿರುವ ಗುಣಭದ್ರನ ಉತ್ತರಪುರಾಣದ ಮುನಿಸುವ್ರತತೀರ್ಥಂಕರನ ಪುರಾಣದಲ್ಲಿ ಈ ಕಥೆಯ ಹೆಸರೇ ಇಲ್ಲ. ಆದುದರಿಂದ ಗುಣಭದ್ರನ ಉತ್ತರಪುರಾಣ ದಲ್ಲಿನ ಕಥೆಯೇ ಇದಕ್ಕೆ ಆಧಾರವೆಂದು ಬರೆದಿರುವ ಮಹನೀಯರುಗಳ ಮಾತು, ಈ ಕಥೆಯುಳ್ಳ ಗುಣಭದ್ರಾಚಾರ್ಯರಚಿತವಾದ ಯಾವುದಾದರೂ ಬೇರೆ ಉತ್ತರ ಪುರಾಣವಿದ್ದು ಅದರಲ್ಲೀ ಕಥೆಯಿದೆಯೋ, ಎಂಬ ಸಂಶಯಕ್ಕೆ ಅವಕಾಶಕೊಟ್ಟಿದೆ ಯಾಗಿ, ಈ ಮಹಾಶಯರುಗಳು ತಾವು ನೋಡಿರುವ ಉತ್ತರಪುರಾಣವಾವುದೋ? ಈ ಕಥೆ ಎಲ್ಲಿದೆಯೋ? ಅದನ್ನು ತಿಳಿಸಿದ್ದರೆ ನಾವೂ ಅದನ್ನು ನೋಡಿ ಹೋಲಿಸಿಕೊಳ್ಳಲು ಅನುಕೂಲವಾಗುತ್ತಿತ್ತು ಮತ್ತು ನಾವವರಿಗೆ ಕೃತಜ್ಞರಾಗಿಯೂ ಇರುತ್ತಿದ್ದೆವು. ಇದರಲ್ಲಾಶ್ಚರ್ಯವೇನೆಂದರೆ, ಸೋಮದೇವಸೂರಿ, ವಾದಿರಾಜ, ಜನ್ನ ಈ ಮೂವರಲ್ಲಿ ಒಬ್ಬನಾದರೂ ಯಾವ ಮೂಲಗ್ರಂಥದ ಆಧಾರದಿಂದ ತನ್ನ ಗ್ರಂಥವನ್ನು ಬರೆದನೆಂಬುದನ್ನು ಹೇಳಿಲ್ಲ. ಅದರಿಂದಲೇ ಈ ಗ್ರಂಥದ ಕಥೆಗೆ ಆಧಾರವಾವುದೋ ಹೇಳಲಾಗುವುದಿಲ್ಲವೆಂದು ಬರೆಯಬೇಕಾಯಿತು.

ಸಂಕ್ಷೇಪವಾಗಿ ಹೇಳುವುದಾದರೆ ಜನ್ನನ ಗ್ರಂಥದ ಕಥೆಯು ಹೀಗಾಗುತ್ತದೆ.

ಭಾರತದ ಯೌಧೇಯದೇಶದಲ್ಲಿ ರಾಜಪುರದರಸು ಮಾರಿದತ್ತನೆಂಬುವನು ತಾನು ಪೂಜಿಸುತ್ತಿದ್ದ ಚಂಡಮಾರಿಗೆ ಬಲಿಗೊಡಲು ಇಬ್ಬರು ಮನುಷ್ಯರನ್ನು ತರಿ ಸುತ್ತಾನೆ. ರಾಜನ ತಳವಾರನು ಇಬ್ಬರು ಬಾಲಕರನ್ನು ಹಿಡಿದು ತಂದೊಪ್ಪಿಸುವನು. ಬಂದವರಿಬ್ಬರೂ ಧೈರ್ಯವಾಗಿ ಬಲಿಗೆ ಸಿದ್ಧವಾದುದನ್ನು ನೋಡಿ ರಾಜನ್ನು ಆಶ್ಚರ್ಯದಿಂದವರಾರೆಂದು ವಿಚಾರಿಸುವನು. ಆಗ ಬಾಲಕರಿಬ್ಬರಲ್ಲಿ (ಒಬ್ಬ ಬಾಲಕ, ಒಬ್ಬಳು ಬಾಲಕಿ) ಹಿರಿಯನು ಆ ಮಾರಿದತ್ತನನ್ನು ಧರ್ಮಮಾರ್ಗಕ್ಕೆ ತರಬೇಕೆಂದು ತನ್ನ ಮತ್ತು ತನ್ನ ತಂಗಿಯ ಭವಾಂತರಗಳ ಕಥೆಯನ್ನು ಹೇಳುತ್ತಾನೆ.

" ಭಾರತವರ್ಷದ ಅವಂತೀದೇಶದ ಉಜ್ಜಯಿನೀ ನಗರದಲ್ಲಿ ಯಶೌಘನೆಂಬ ರಾಜನು ರಾಜ್ಯವಾಳುತ್ತಿದ್ದನು. ಅವನ ರಾಣಿ ಚಂದ್ರಮತಿ. ಮಗ ಯಶೋಧರ; ಅವನ ಹೆಂಡತಿ ಅಮೃತಮತಿ. ತಂದೆಯಾದ ಯಶೌಘನು ನರೆಗೂದಲನ್ನು ಕಂಡು ಸಂಸಾರದಲ್ಲಿ ವಿರಕ್ತನಾಗಿ ಮಗನಿಗೆ ರಾಜ್ಯವನ್ನು ಕೊಟ್ಟು ಜಿನದೀಕ್ಷೆಯನ್ನು ಸ್ವೀಕ ರಿಸುವನು. ಮಗಯಶೋಧರನು ಸುಖದಿಂದ ರಾಜ್ಯವಾಳುತ್ತಿದ್ದನು.

ಒಂದು ರಾತ್ರಿ ಯಶೋಧರನೊಡನೆ ಮಲಗಿದ್ದ ಅಮೃತಮತಿಯು ಅರ್ಧ ರಾತ್ರಿಯ ಸಮಯದಲ್ಲಿ ಅಂತಃಪುರದ ಸಮೀಪದ ಆನೆಯ ಲಾಯದಲ್ಲೊಬ್ಬ ಮಾವುತನು ತನಗೆ ತಾನೇ ಹಾಡಿಕೊಳ್ಳುತ್ತಿದ್ದ ಇನಿದಾದ ಮನೋಹರವಾದ ಸಂಗೀತವನ್ನು ಕೇಳಿ ಮನಸೋತು, ಆ ಸಂಗೀತಗಾರನನ್ನು ನೋಡಿ ಕೂಡ ಬೇಕೆಂಬ ಉತ್ಕಟವಾದ ಇಚ್ಛೆಯನ್ನು ಹೊಂದುತ್ತಾಳೆ. ಮರುದಿನ ತನ್ನ ಆಪ್ತ

ಸಖಿಯೊಬ್ಬಳನ್ನು ಸಂಧಾನಕ್ಕೆ ಆ ಮಾವುತನ ಬಳಿಗೆ ಕಳುಹಿಸುತ್ತಾಳೆ. ಅವಳು ಹೋಗಿಬಂದು ಆ ಮಾವುತನ ಕುತ್ಸಿತವಾದ ಅಸಹ್ಯಕರವಾದ ರೂಪವನ್ನು ವರ್ಣಿಸುತ್ತಾಳೆ. ಈ ವರ್ಣನೆಯನ್ನು ಕೇಳಿಯೂ ಮನಸ್ಸನ್ನು ವಶಮಾಡಿಕೊಳ್ಳಲಾರದೆ ಅವನನ್ನೇ ಹೊಂದಿಸಿಕೊಡುವಂತೆ ಹೇಳಿಕಳುಹಿಸಿ ಅವನನ್ನು ಸೇರಿ ಗುಪ್ತವಾಗಿ ಅವನಲ್ಲಿಗೆ ಹೋಗಿಬರುತ್ತಿರುತ್ತಾಳೆ. ಇದರಿಂದ ತನ್ನ ಗಂಡನಲ್ಲವಳಿಗೆ ಪ್ರೀತಿ ಕಡಮೆಯಾಗುತ್ತದೆ. ಇದನ್ನು ಕಂಡ ರಾಜ ಯಶೋಧರನು ಒಂದು ರಾತ್ರಿ ಗಾಢ ನಿದ್ದೆಬಂದವನಂತೆ ಮಲಗಿರುತ್ತಾನೆ. ಅರ್ಧರಾತ್ರಿಯಲ್ಲಿ ಪಕ್ಕದಲ್ಲಿ ಮಲಗಿದ್ದ ಅಮೃತ ಮತಿಯು ಮೆಲ್ಲಗೆ ಹಾಸಿಗೆಯಿಂದ ಜಾರಿ ತನ್ನ ವಿಟನಲ್ಲಿಗೆ ಹೋಗುತ್ತಾಳೆ. ರಾಜನೂ ಅವಳ ಹಿಂದೆಯೇ ಹೋಗುತ್ತಾನೆ. ತಡವಾಗಿ ಬಂದಳೆಂದು ಕುಪಿತನಾದ ಆ ಅಷ್ಟ ವಂಕನಾದ ಮಾವುತನು ಅವಳ ಮುಂದಲೆಯನ್ನು ಹಿಡಿದೆಳೆದು ಒದೆಯುತ್ತಾನೆ. ಅದೆಲ್ಲವನ್ನೂ ಸಹಿಸಿಕೊಂಡು ಅವನ ಕಾಲುಗಳಮೇಲೆ ಬಿದ್ದು ಕ್ಷಮೆಯನ್ನು ಬೇಡಿ 'ನೀನಲ್ಲದೆ ಉಳಿದ ಪುರುಷರೆಲ್ಲರೂ ನನಗೆ ಸಹೋದರ ಸಮಾನರು' ಎಂದು ಹೇಳಿ ನಂಬಿಕೆಯನ್ನುಂಟುಮಾಡಿ ಸಮಾಧಾನಪಡಿಸಿಕೊಳ್ಳುತ್ತಾಳೆ. ಹಿಂದೆಯೇ ಬಂದು ಒರೆತೆಗೆದ ಖಡ್ಗದೊಡನೆ ನಿಂತಿದ್ದ ರಾಜನು ಅವರ ಪ್ರಣಯವನ್ನು ಕಣ್ಣಾರೆನೋಡಿ ಕೋಪದಿಂದ ಅವರಿಬ್ಬರನ್ನೂ ಕತ್ತರಿಸಲುದ್ಯುಕ್ತನಾಗಿ ಹಾಗೆಯೇ ತಾಳ್ಮೆಯನು ತೆಗದುಕೊಂಡು ಕೊಲ್ಲದೆ ಹಿಂದಿರುಗಿಬಂದು ಮೊದಲಿನಂತೆಯೇ ಹಾಸಿಗೆಯಲ್ಲಿ ಮಲಗಿರುತ್ತಾನೆ. ಅಮೃತಮತಿಯೂ ಬಂದು ಅವನ ಪಕ್ಕದಲ್ಲೇ ಮಲಗುತ್ತಾಳೆ. ಮರುದಿನ ರಾಜನು ತನ್ನ ಹೆಂಡತಿಯನ್ನು ಕಂಡಾಗ ವಿನೋದದಿಂದ ಮಾತನಾಡುತ್ತ ಅವಳನ್ನು ಮೂದಲಿಸುತ್ತಾನೆ. ತನ್ನ ಗುಟ್ಟು ರಟ್ಟಾಯಿತೆಂದು ತಿಳಿದ ಅಮೃತಮತಿಯು ಮೂರ್ಛೆಗೊಂಡತೆ ನಟಿಸುತ್ತಾಳೆ.

ತಾನು ಪ್ರೀತಿಸುತ್ತಿದ್ದ ಹೆಂಡತಿಯ ದುರ್ವಿಸಳನವನ್ನು ತಿಳಿದು ಮನಃಕ್ಲೇಶದಿಂದ ಕೂಡಿದವನಾಗಿದ್ದ ಯಶೋಧರನನ್ನು ಕಂಡ ಅವನ ತಾಯಿ ಚಂದ್ರಮತಿಯು ಮಗನ ದುಃಖಕ್ಕೆ ಕಾರಣವನ್ನು ಕೇಳುತ್ತಾಳೆ. ನಿಜಾಂಶವನ್ನು ಹೇಳಲು ಇಚ್ಛೆಯಿಲ್ಲದೆ ತಾನೊಂದು ದುಃಸ್ವಪ್ನವನ್ನು ಕಂಡಂತೆ ಹೇಳುತ್ತಾನೆ. ಅದಕ್ಕವಳು ಮಾರಿಯನ್ನು ಬಲಿಯಿಂದ ಪೂಜೆಮಾಡಿ ಅಶುಭವನ್ನು ಪರಿಹರಿಸಿಕೊಳ್ಳೆಂದು ಹೇಳುತ್ತಾಳೆ. ಯಶೋಧರನು ಪ್ರಾಣಿಹಿಂಸೆ ಮಾಡಲೊಪ್ಪುವುದಿಲ್ಲ. ಕೊನೆಗೊಂದು ಹಿಟ್ಟಿನಕೋಳಿಯನ್ನಾದರೂ ಮಾರಿಗೆ ಬಲಿಕೊಡಲೇಬೇಕೆಂದು ತಾಯಿಯು ಮಗನನ್ನು ನಿರ್ಬಂಧದಿಂದ ಒಪ್ಪಿಸುತ್ತಾಳೆ. ಮನಸ್ಸಿಲ್ಲದಿದ್ದರೂ ನಿರ್ಬಂಧಕ್ಕೊಳಗಾಗಿ ಒಪ್ಪಿ ಹಿಟ್ಟಿನಕೋಳಿಯೊಂದನ್ನು ಬಲಿಗೊಡುತ್ತಾನೆ. ದುರದೃಷ್ಟದೆಶೆಯಿಂದಾ ಹಿಟ್ಟಿನಕೋಳಿಯು 'ಕೊಕ್ಕೊಕೋ' ಎಂದು ಕೂಗಿಬಿಡುತ್ತದೆ. ಇದನ್ನು ನೋಡಿ ಜುಗುಪ್ಸೆಯಿಂದ ರಾಜನು ಮಗ ಯಶೋಮತಿಯೆಂಬುವನಿಗೆ ರಾಜ್ಯವನ್ನು ಕೊಟ್ಟು ದೀಕ್ಷೆಗೆ ಹೊರಡಲು ಸಿದ್ಧ

ನಾಗುತ್ತಾನೆ. ಆ ಸಮಯದಲ್ಲಿ ರಾಣಿ ಅಮೃತಮತಿಯು ತಾನೂ ದೀಕ್ಷೆಗೆ ಹೊರ ಡಲನುವಾಗಿರುವಂತೆಹೇಳಿ ಗಂಡನನ್ನೂ ಅತ್ತೆಯನ್ನೂ ತನ್ನರಮನೆಗೆ ಊಟಕ್ಕೆ ಕರೆಯುವಳು. ಅವನು ತನಗೆ ಹೆಂಡತಿಯಮೇಲಿದ್ದ ಆಕ್ರೋಶವನ್ನು ತೋರ್ಪಡಿಸದೆ ಒಪ್ಪಿಕೊಳ್ಳುವನು. ಅಮೃತಮತಿಯು ದ್ವೇಷದಿಂದ ಗಂಡನಿಗೂ ಅತ್ತೆಗೂ ವಿಷ ವನ್ನು ಹಾಕುವಳು. ಅವರೀರ್ವರೂ ಸಾಯುವರು. ಅಮೃತಮತಿಯು ಸ್ವೇಚ್ಛೆ ಯಾಗಿ ಅಷ್ಟವಂಕನನ್ನು ರಾಣಿವಾಸದಲ್ಲಿ ಕೂಡಿಕೊಂಡಿರುವಳು.

ಇತ್ತ ಸತ್ತವರೀರ್ವರಲ್ಲಿ ಯಶೋಧರನು ಒಂದು ನವಿಲಾಗಿಯೂ, ಚಂದ್ರ ಮತಿಯು ಬೇಟೆಯ ನಾಯಿಯಾಗಿಯೂ ತಿರ್ಯಂಚಗತಿಯಲ್ಲಿ ಹುಟ್ಟಿ, ಹೇಗೋ ಅವೆರಡೂ ರಾಜ ಯಶೋಮತಿಯ ಅರಮನೆಗೆ ಬಂದು ಸೇರುವುವು. ಒಂದು ದಿನ ಅಮೃತಮತಿಯ ಉಪ್ಪರಿಗೆಯಲ್ಲಿ ಅಷ್ಟವಂಕನೂ ಅವಳೂ ಇರುವುದನ್ನು ನೋಡಿ ಜನ್ಮಾಂತರ ದ್ವೇಷದಿಂದಾ ನವಿಲು ಅವನ ಕಣ್ಣನ್ನು ಕುಟುಕುವುದು. ಅದನ್ನು ಕಂಡ ಅಮೃತಮತಿಯು ಆ ನವಿಲನ್ನು ಹೊಡೆಯಲು ಅದು ಉಪ್ಪರಿಗೆಯಿಂದ ಕೆಳಕ್ಕೆ ಬೀಳುವುದು. ಯಶೋಮತಿಯು ತನ್ನ ರಾಣಿಯೊಡನೆ ಪಗಡೆಯಾಡುತ್ತ ಕುಳಿ ತಿದ್ದು ಲೆತ್ತವ ಕೊಳ್ಳೆಂದು ದಾಳವನ್ನು ಬಿಡುವನು. ಅಲ್ಲಿದ್ದ ಬೇಟೆಯ ನಾಯಿಯು ಬೀಳುತ್ತಿದ್ದ ನವಿಲನ್ನು ಹಿಡಿಯೆಂದು ಹೇಳಿದಂತೆ ತಿಳಿದುಕೊಂಡು ಆ ನವಿಲನ್ನು ಕೊಲ್ಲುವುದು. ಅದನ್ನು ನೋಡಿದ ರಾಜನು ನವಿಲನ್ನು ಕೊಂದಿತಲ್ಲಾ ಎಂದು ಕೋಪದಿಂದ ನಾಯಿಯನ್ನು ಹೊಡೆಯುವನು. ಅದು ಸತ್ತುಹೋಗುವುದು.

ಹೀಗೆ ಆ ನಾಯಿ ನವಿಲುಗಳು ಸತ್ತು ನವಿಲು ವಿಂಧ್ಯಪರ್ವತದಲ್ಲಿ ಮುಳ್ಳು ಹಂದಿಯಾಗಿಯೂ, ನಾಯಿ ಅಲ್ಲಿಯೇ ಒಂದು ಹಾವಾಗಿಯೂ ಹುಟ್ಟುವುವು. ಅಲ್ಲಿ ಹಂದಿಯು ಹಾವನ್ನು ತಿನ್ನುವುದು. ಹಂದಿಯನ್ನು ಹುಲಿಯೊಂದು ತಿನ್ನುವುದ. ಆ ಹಂದಿ ಹಾವುಗಳು ಸತ್ತು, ಹಂದಿಯು ಸಿಪ್ರಾನದಿಯಲ್ಲಿ ಒಂದು ಮೀನಾಗಿ ಹುಟ್ಟು ವುದು. ಹಾವು ಅದೇ ನದಿಯಲ್ಲಿಯೇ ಒಂದು ಮೊಸಳೆಯಾಗುವುದು. ಮೀನನ್ನು ಹಿಡಿಯಲು ಓಡಾಡುತ್ತಿದ್ದ ಮೊಸಳೆಯು ಆ ನದಿಗೆ ಬಂದಿದ್ದ ರಾಜನ ಅಂತಃಪುರದ ಕುಬ್ಜೆಯೊಬ್ಬಳನ್ನು ಹಿಡಿಯುವುದು. ಅದನ್ನು ಕೇಳಿದ ರಾಜನು ಕೋಪದಿಂದ ಆ ಮೊಸಳೆಯನ್ನು ಬೆಸ್ತರಿಂದ ಹಿಡಿಯಿಸಿ ಕೊಲ್ಲಿಸುವನು. ಅದು ಸತ್ತು ಹೊಲಗೇರಿ ಯಲ್ಲಿ ಆಡಾಗಿ ಹುಟ್ಟುವುದು. ಆಗ ಜಾಲಗಾರರ ಬಲೆಗೆ ಸಿಕ್ಕಿದ್ದ ಮೀನನ್ನು, (ಹಿಂದಿನ ಜನ್ಮದಲ್ಲಿ ಮುಳ್ಳುಹಂದಿಯಾಗಿದ್ದ ಯಶೋಧರನ ಆತ್ಮ) ಅದು ಹಳದಿ ಬಣ್ಣವುಳ್ಳುದ್ದಾಗಿದ್ದುದರಿಂದದನ್ನು ಶ್ರಾದ್ಧಕ್ಕೆ ಉತ್ತಮವಾದುದೆಂದು ಕೇಳಿ, ಅದರ ಒಂದು ತುಂಡನ್ನು ಕತ್ತರಿಸಿಸಿ ಬೇಯಿಸಿ ಅಡಿಗೆಮಾಡಿಸುವನು. ಉಳಿದಿದ್ದ ಮೀನಿನ ದೇಹವನ್ನೂ ತಲೆಯ ಭಾಗವನ್ನೂ ನೀರೊಳಗಿಡಿಸುವನು. ಶ್ರಾದ್ಧದಲ್ಲಿ ಊಟ ಮಾಡಿದ ಬ್ರಾಹ್ಮಣರು ಯಶೋಧರನು ಸತ್ತು ಸ್ವರ್ಗದಲ್ಲಿರುವನೆಂದು ಮಾತನಾಡಿ

ಕೊಳ್ಳುತ್ತಿದ್ದುದನ್ನು ಕೇಳಿದ ಕಂಠಗತಪ್ರಾಣವಾಗಿದ್ದಾ ಮೀನು ಜಾತಿಸ್ಮರನಾಗಿ ತಾನು ಮೀನಾಗಿ ಸಾಯುತ್ತಿರುವುದನ್ನು ತಿಳಿಯದೆ ಸ್ವರ್ಗದಲ್ಲಿರುವನೆಂದು ಹರಟುತ್ತಿರುವ ಬ್ರಾಹ್ಮಣರ ಮಾತನ್ನು ತನ್ನ ಮಗನು ನಂಬಿರುವನಲ್ಲಾ ಎಂದು ದುಃಖಪಡುತ್ತ ಸತ್ತು ಹೊಲಗೇರಿಯಲ್ಲಿ (ಮೊಸಳೆಯಾಗಿದ್ದು ಸತ್ತು) ಹುಟ್ಟಿದ್ದ ಆಡಿನ ಹೊಟ್ಟೆಯಲ್ಲಿ ಹೋತನಾಗಿ ಹುಟ್ಟುವುದು. ಆ ಹೋತನೇ ಕೊಬ್ಬಿ ಬೆಳೆದು ತಾಯಿಯಾಡಿನಮೇಲೆಯೇ ಹತ್ತಿದುದನ್ನು ಕಂಡು ಮತ್ತೊಂದು ಬಲಿಷ್ಠವಾದ ಹೋತನು ಅದನ್ನು ಕೊಲ್ಲುವುದು. ಅದು ಸತ್ತು ತಾಯಿಯಾಡಿನ ಹೊಟ್ಟೆಗೇ ಸೇರುವುದು. ಅದು ತೆನೆತುಂಬಿ ಪ್ರಸವಕಾಲವಾಗಿದ್ದೊಂದು ದಿನ ಯಶೋಮತಿರಾಜನು ಬೇಟೆಗಾಗಿ ಬಂದಿದ್ದವನು ಆ ತೆನೆಯಾಗಿದ್ದ ಆಡನ್ನು ಹೊಡೆದು ಕೊಲ್ಲುವನು. ಬಾಣದೇಟಿನ ಗಾಯದಿಂದ ಜೀವಸಹಿತ ಹೊರಕ್ಕೆ ಬಿದ್ದ ಆ ಗಂಡುಮರಿಯನ್ನು ಒಬ್ಬ ಮಾದಿಗರವನಿಗೆ ಸಾಕಲು ಕೊಡುವನು.

ಮತ್ತೊಂದು ದಿನ ಯಶೋಮತಿರಾಜನು ಬೇಟೆಯಲ್ಲಿ ಸಿಕ್ಕಿದ್ದ ಕೋಣನನ್ನು ಮಾರಿಗೆ ಬಲಿಗೊಟ್ಟು ಆ ಮಾಂಸವನ್ನು ಮಹಾಲಯ ಪೂಜೆಗೆಂದು ಕೊಡುವನು. ಅದು ಕೊಳೆತುಹೋಗುವುದು. ಅದನ್ನು ಬಿಸಿಲಿಗೆ ಹಾಕುವರು. ಅದನ್ನು ಕಾಗೆಗಳೂ ನಾಯಿಯೂ ಮುಟ್ಟುವುವು. ಅದು ಅಪರಿಶುದ್ಧವಾಯಿತೆಂದೂ ಅದನ್ನು ಆಡಿನ ಕಾಲಿನ ಧೂಳಿಯಿಂದ ಪರಿಶುದ್ಧಮಾಡಬೇಕೆಂದೂ ಪುರೋಹಿತರು ಹೇಳಿದುದನ್ನು ಕೇಳಿ ರಾಜನು ಮಾದಿಗರವನಿಗೆ ಸಾಕಲುಕೊಟ್ಟಿದ್ದ ಆಡನ್ನು ತರಿಸಿ ಶುದ್ಧಿಮಾಡಿಸುವನು. ಅದನ್ನು ತಿಂದ ಬ್ರಾಹ್ಮಣರು ಯಶೋಧರಚಂದ್ರಮತಿಯರು ಸ್ವರ್ಗದಲ್ಲಿರುವರೆಂದು ಕೂಗಿಕೊಳ್ಳುತ್ತಿರುವರು. ಅದನ್ನು ಕೇಳಿದ ಹೋತನು ಜಾತಿಸ್ಮರನಾಗಿ, ತಾನು ಯಶೋಧರನಾಗಿದ್ದುದನ್ನೂ, ತಾನಿರುವ ಸ್ಥಳವೇ ತನ್ನರಮನೆಯೆಂದೂ. ತನ್ನ ಹೆಂಡತಿ ವಿಷದಿಂದ ತನ್ನನ್ನು ಕೊಂದುದನ್ನೂ ತಿಳಿದು ಬಹಳ ದುಃಖಪಡುತ್ತಿರುವುದು.

ಅತ್ತ ಯಶೋಮತಿಯಿಂದ ಕೊಲ್ಲಲ್ಪಟ್ಟಿದ್ದ ಗರ್ಭಿಣೀ ಆಡು ಸತ್ತು ಕಳಿಂಗ ದೇಶದಲ್ಲಿ ಕೋಣನಾಗಿ ಹುಟ್ಟಿ ಒಬ್ಬ ಶೆಟ್ಟಿಯ ಬಳಿಗೆ ಸೇರಿ ಹಿತ್ತಾಳೆಯನ್ನು ಹೊತ್ತುಕೊಂಡು ಉಜ್ಜಯಿನಿಗೆ ಬರುವುದು. ಬಾಯಾರಿ ಸಿಪ್ರಾನದಿಯಲ್ಲಿ ನೀರು ಕುಡಿದು ನೀರೊಳಗೆ ಮಲಗಿದ್ದ ಆ ಕೋಣನು ಅಲ್ಲಿಗೆ ನೀರು ಕುಡಿಯಲು ಬಂದ ರಾಜನ ಪಟ್ಟದ ಕುದುರೆಯನ್ನು ತಿವಿದು ಸಾಯಿಸುವುದು. ಇದನ್ನು ತಿಳಿದ ರಾಜನು ಬಲಾತ್ಕಾರದಿಂದಾಕೋಣನನ್ನು ಹಿಡಿತರಿಸಿ ಕೊಲ್ಲಿಸುವನು. ಅದರ ಮಾಂಸವನ್ನು ತಿಂದು ರುಚಿಗಂಡ ಅಮೃತಮತಿಯು ಅರಮನೆಯಲ್ಲಿ ಕಟ್ಟಿದ್ದ (ಶುದ್ಧಮಾಡಲು ತರಿಸಿದ್ದ) ಹೋತನನ್ನು ಕೊಲ್ಲಿಸಿ ತಿನ್ನುವಳು. ಹಾಗೆ ಅದನ್ನು ಕೊಲ್ಲುವಾಗ ರಾಣಿಯ ಸಖಿಯರು ಅವಳಿಗೆ ಉಂಟಾಗಿರುವ ಕುಷ್ಠವ್ಯಾಧಿಯ ವಿಚಾರವನ್ನೂ, ಆಗಲೂ

ಅಷ್ಟವಂಕನನ್ನು ಬಿಡದೆ ಕಟ್ಟಿಕೊಂಡಿರುವುದನ್ನು ಕುರಿತು ಮಾತನಾಡಿಕೊಳ್ಳುತ್ತಿದ್ದುದನ್ನು ಕೇಳಿ ಆ ಆಡು ರೌದ್ರಧ್ಯಾನದಲ್ಲಿ ಸತ್ತು ಹೊಲಗೇರಿಯಲ್ಲೊಂದು ಕೋಳಿಯ ಹೊಟ್ಟೆಯಲ್ಲಿ ಹುಂಜನಾಗಿ ಹುಟ್ಟುವುದು. ರಾಜನಿಂದ ಕೊಲ್ಲಿಸಲ್ಪಟ್ಟ ಆ ಕೋಣನೂ ಅದೇ ಕೋಳಿಯ ಹೊಟ್ಟೆಯಲ್ಲಿ ಹೆಣ್ಣುಕೋಳಿಯಾಗಿ ಹುಟ್ಟುವುದು. ಅದರ ಯಜಮಾನನು ಆ ಎರಡು ಕೋಳಿಯ ಮರಿಗಳನ್ನೂ ಅವುಗಳ ಅಂದಕ್ಕಾಗಿ ರಾಜನಿಗೆ ಒಪ್ಪಿಸುವನು. ರಾಜನವನ್ನು ತನ್ನ ತಳವಾರ ಚಂಡಕರ್ಮನಿಗೆ ಸಾಕಲು ಕೊಡುವನು.

ಒಂದಾನೊಂದು ದಿನ ಆ ಚಂಡಕರ್ಮನು ಆ ನಗರದ ಉಪವನದ ಸಮೀಪದಲ್ಲಿ ಬರುತ್ತಿದ್ದವನು ಅಲ್ಲಿ ಬಂದು ನೆಲಸಿದ್ದ ಧ್ಯಾನಾರೂಢರಾಗಿದ್ದ ಅಕಂಪನರೆಂಬ ಜೈನಮುನಿಯನ್ನು ಕಂಡು ಅವರಿಗೆ ನಮಸ್ಕರಿಸುವನು. ಆಗವರು ಬಹಿರ್ಮುಖರಾಗಿ ಆಶೀರ್ವಾದಮಾಡುವರು. ಆಗ ಚಂಡಕರ್ಮನವರನ್ನು ಕಣ್ಣುಮುಚ್ಚಿಕೊಂಡು ಕುಳಿತು ಏನು ಮಾಡುತ್ತಿದ್ದಿರೆಂದು ಕೇಳುವನು. ಅದಕ್ಕವರು ಆತ್ಮನನ್ನು ಧ್ಯಾನಿಸುತ್ತಿದ್ದೆನೆಂದು ಹೇಳುವರು. ಅದಕ್ಕವನು ಆತ್ಮನೆಂಬುದೇ ಇಲ್ಲವೆನ್ನುವನು. ಹೀಗೆ ಚರ್ಚೆಮಾಡಿದ ಆ ಚಂಡಕರ್ಮನು ಆಸನ್ನಭವ್ಯನೆಂದವರು ಅವಧಿಯಿಂದ ತಿಳಿದು ಅವನಿಗೆ ಆತ್ಮನ ಮತ್ತು ಧರ್ಮದ ಸ್ವರೂಪವನ್ನು ತಿಳಿಸುವರು. ಅವನವರ ಮಾತನ್ನು ನಂಬಿ ಸಮ್ಯಕ್ತ್ವವನ್ನು ಹೊಂದಿ ಪಂಚಾಣುವ್ರತಗಳನ್ನು ಸ್ವೀಕರಿಸುವನು. ಅವನ ಸಂಗಡವಿದ್ದಾ ಕೋಳಿಗಳೆರಡೂ ಆಚಾರ್ಯರ ಮಾತಿನಿಂದ ಉಪಶಮಭಾವವನ್ನು ಹೊಂದಿ ತಾವೂ ವ್ರತಗಳನ್ನು ಕೈಕೊಂಡು ಸಂತೋಷದಿಂದ ಕೂಗಿಕೊಳ್ಳುವುವು. ಅದೇ ಉಪವನದ ಬೇರೊಂದೆಡೆಯಲ್ಲಿ ತನ್ನ ರಾಣಿಯೊಡನೆ ವಿಹಾರಕ್ಕೆಂದು ಬಂದಿದ್ದ ಯಶೋಮತಿರಾಜನು ಆ ಕೋಳಿಗಳ ಕೂಗನ್ನು ಕೇಳಿ, ತನ್ನ ರಾಣಿಗೆ ತನ್ನ ಶಬ್ದವೇಧಿ ವಿದ್ಯಾಕೌಶಲವನ್ನು ತೋರಿಸಲು ಧ್ವನಿಯನ್ನು ಗುರಿಗಟ್ಟಿ ಬಾಣಪ್ರಯೋಗಮಾಡುವನು. ಇದರಿಂದ ಆ ಕೋಳಿಗಳೆರಡೂ ಸತ್ತು, ಶುಭಪರಿಣಾಮದಲ್ಲಿದ್ದುದರಿಂದ ಆ ರಾಜನ ರಾಣಿ ಕುಸುಮಾವಳಿಯ ಹೊಟ್ಟೆಯಲ್ಲೇ ಅವಳಿಮಕ್ಕಳಾಗಿ ಹುಟ್ಟುವುವು.

ಇತ್ತ ಮತ್ತೊಂದು ದಿನ ಯಶೋಮತಿರಾಜನು ಬೇಟೆಗೆಂದು ಬಂದಿದ್ದವನು ಮುನಿಗಳೊಬ್ಬರನ್ನು ಕಂಡು ಬೇಟೆ ದೊರೆಯದೇ ಹೋಗಲು ಅದಕ್ಕೆ ಆ ಮುನಿಯೇ ಕಾರಣನೆಂದು ಕೊಲ್ಲುವುದಕ್ಕುಜ್ಜುಗಿಸುವನು. ಅದನ್ನು ಕಂಡ ಅವನ (ರಾಜನ) ಸ್ನೇಹಿತನಾದ ಕಲ್ಯಾಣಮಿತ್ರನೆಂಬುವನು ಅವನನ್ನು ತಡೆದು ಆ ಮುನಿವರ್ಯರು ಯಾರೆಂಬುದನ್ನು ತಿಳಿಸುವನು. ತನ್ನ ಅಕಾರ್ಯಕ್ಕೆ ನಾಚಿದ ದೊರೆಯು ಆ ಮುನಿಶ್ರೇಷ್ಠರಾದ ಸುದತ್ತಾಚಾರ್ಯರಿಗೆ ನಮಸ್ಕರಿಸುವನು. ಅವರು ಅವನಿಗೆ ಧರ್ಮಸ್ವರೂಪವನ್ನು ತಿಳಿಸಿ, ಅವನ ತಾತ (ಯಶೌಘ), ತಂದೆ (ಯಶೋಧರ),

ತಾಯಿ (ಚಂದ್ರಮತಿ) ಇವರುಗಳ ಭವಾಂತರದ ಕಥೆಯೆಲ್ಲವನ್ನೂ ಹೇಳಿ ಒಂದು ಸಂಕಲ್ಪಹಿಂಸೆಯಿಂದ ಉಂಟಾದ ದುರ್ಗತಿಗಳನ್ನು ತಿಳಿಸಿ, ಅವನ ತಂದೆ ಪಿತಾ ಮಹಿಯರೇ ಈಗ ಅವನಿಗೆ ಅವಳಿಮಕ್ಕಳಾಗಿ ಹುಟ್ಟಿರುವುದನ್ನು ವಿಸ್ತಾರವಾಗಿ ತಿಳಿಸುವರು. ಹೀಗೆ ಧರ್ಮಸ್ವರೂಪವನ್ನು ತಿಳಿದ ಯಶೋಮತಿರಾಜನು ತಾನದು ವರೆಗೆ ಮಾಡಿದ್ದ ಪ್ರಾಣಿಹಿಂಸೆಗೆ ಹೇಸಿ ತನ್ನ ಮಗನಿಗೆ ರಾಜ್ಯವನ್ನು ಕೊಟ್ಟು ಜಿನ ದೀಕ್ಷೆಯನ್ನು ಸ್ವೀಕರಿಸುವನು. ಮಕ್ಕಳಾದ ಅಭಯರುಚಿ ಅಭಯಮತಿಗಳು ಸುದತ್ತಾಚಾರ್ಯರಲ್ಲಿ ಶಿಷ್ಯವೃತ್ತಿಯಲ್ಲಿರುವರು. ಮತ್ತು ಆ ಕಥೆಯಲ್ಲಿ ಬಂದ ಯಶೋಮತಿರಾಜನ ಮಕ್ಕಳೇ ತಾವೆಂದು ತಿಳಿಸುವರು. ಮಾರಿ ದತ್ತನ ತಂಗಿಯೇ ಯಶೋಮತಿಯ ರಾಣಿ. ಅದರಿಂದವನು ತನ್ನ ತಂಗಿಯ ಮಕ್ಕಳನ್ನು ಕಂಡು ಅತ್ಯಂತಸಂತೋಷದಿಂದವರನ್ನು ಸಂತೈಸಿ ತಾನು ಮಾಡುತ್ತಿದ್ದ ಪ್ರಾಣಿಹಿಂಸೆಯನ್ನು ಬಿಡಲು ಸಿದ್ಧನಾಗುವನು. ಆ ಸಮಯದಲ್ಲಿ ಆವರೆಗೆ ಪ್ರಾಣಿಹಿಂಸೆಯಿಂದ ತೃಪ್ತಳಾಗುತ್ತಿದ್ದ ಚಂಡಮಾರಿಯೂ ಪ್ರತ್ಯಕ್ಷಳಾಗಿ ಪ್ರಾಣಿ ವಧೆಯನ್ನು ನಿರಾಕರಿಸಿ ಕೇವಲ ಜಲಗಂಧಾಕ್ಷತೆದೀಪಧೂಪಫಲಗಳಿಂದ ಮಾತ್ರ ತನ್ನನ್ನು ಪೂಜಿಸಬೇಕೆಂದು ಹೇಳಿ ಅಂತರ್ಧಾನಳಾಗುವಳು. ಬಲಿಗೆಂದುತಂದಿದ್ದ ಪ್ರಾಣಿಗಳೆಲ್ಲವನ್ನೂ ಅವನು ಬಿಡಿಸುವನು. ತನ್ನ ರಾಜ್ಯವನ್ನು ಮಗನಿಗೆಕೊಟ್ಟು ಜಿನ ದೀಕ್ಷೆಯನ್ನು ಹೊಂದಿ ತಪಶ್ಚರಣಮಾಡಿ ಸತ್ತು ದೇವನಾಗಿ ಹುಟ್ಟುವನು. ಆ ಕುಮಾರರಿಬ್ಬರೂ ತಮ್ಮ ಗುರುಗಳಲ್ಲೇ ಶಿಷ್ಯರಾಗಿದ್ದುಕೊಂಡು ಸಂಯಮದಲ್ಲಿ ನಡೆದು ಸತ್ತು ಸ್ವರ್ಗದಲ್ಲಿ ಹುಟ್ಟುವರು. ಇದೆಲ್ಲವನ್ನೂ ಕೇಳಿ ತಿಳಿದ ಯಶೋಮತಿ ರಾಜನ ಮಗ ಯಶೋಧರನು ಸಮ್ಯಕ್ತ್ವವನ್ನು ಕೈಕೊಂಡು ಜೈನಧರ್ಮಪ್ರಭಾವನೆ ಮಾಡುತ್ತ ಸುಖದಿಂದ ರಾಜ್ಯವಾಳುತ್ತಿದ್ದನು."

ಹೀಗೆಂದು ಕಥೆಮುಗಿಯುತ್ತದೆ.

ಜನ್ನನು ಅನುಸರಿಸಿರುವ ವಾದಿರಾಜನ ಗ್ರಂಥಕ್ಕಿಂತ ಮೊದಲೇ (ಕ್ರಿ. ಶ. 959) ಹುಟ್ಟಿದ್ದ ಸೋಮದೇವಸೂರಿಯ ಯಶಸ್ತಿಲಕಚಂಪುವನ್ನು ಜನ್ನನು ನೋಡಿರ ಬಹುದಾದರೂ ತನ್ನ ಗ್ರಂಥದಲ್ಲಿ ಅದರ ಕಥೆಯನ್ನನುಸರಿಸಿಲ್ಲ. ಯಶಸ್ತಿಲಕದಲ್ಲಿ, ಜನ್ನನ ಗ್ರಂಥದಲ್ಲಿರುವಂತೆ ಅಮೃತಮತಿಯ ಪ್ರಣಯಕ್ಕೆ ಮಾವುತನ ಸಂಗೀತ ಕಾರಣವಾಯಿತೆಂದಿಲ್ಲ. ಯಶೋಧರನು ಕಣ್ಣಾರೆಕಂಡ, ತನ್ನ ಹೆಂಡತಿಗೆ ಅಷ್ಟವಂಕ ನಲ್ಲುಂಟಾಗಿದ್ದ ಪ್ರೀತಿಗೆ ಆ ಅಷ್ಟವಂಕನ ಸಂಗೀತವೇ ಕಾರಣವಿರಬೇಕೆಂದು ಊಹಿಸುತ್ತಾನೆ ಅಷ್ಟೆ. ಅಮೃತಮತಿಯು ತನಗೆ ಗಂಡನಲ್ಲಿ ಪ್ರೀತಿಯೇ ಇಲ್ಲವೆಂದೂ ಆ ಅನುರಾಗದ ಅಭಾವದಿಂದಲೇ ತಾನು ಬೇರೊಬ್ಬನನ್ನು ಪ್ರೀತಿಸಿದಳೆಂದೂ, ತಾನು ಮಾಡಿದುವೇ ಸರಿಯೆಂದು ತನ್ನ ಮನಸ್ಸಿನಲ್ಲಿ ಯೋಚಿಸಿ ನಿರ್ಧರಿಸಿಕೊಂಡ ಳೆಂದೂ ಸೋಮದೇವಸೂರಿಯು ಹೇಳುತ್ತಾನೆ. ಯಶಸ್ತಿಲಕದ ಪ್ರಕಾರ ಯಶೋ

ಧರನು ತನ್ನ ತಾಯಿಯೊಡನೆ ತಾನು, ವೈರಾಗ್ಯವನ್ನು ಹೊಂದಿ ಮಗನಿಗೆ ರಾಜ್ಯ ವನ್ನು ಕೊಟ್ಟು ತಪಸ್ಸಿಗೆ ಹೋದಂತೆ, ಕನಸನ್ನು ಕಂಡೆನೆಂದು ಹೇಳುವನು.

ತನ್ನ ದುರ್ವಿಳಸನವು ತನ್ನ ಗಂಡನಿಗೆ ತಿಳಿದುಹೋಗಿದೆಯೆಂದು ಗೊತ್ತಾದ ಮೇಲೆ ಅಮೃತಮತಿಯು, ಅವನು ತನ್ನನ್ನು ಶಿಕ್ಷಿಸುವುದಕ್ಕೆ ಮೊದಲು ತಾನೇ ತನ್ನ ಮಾರ್ಗವನ್ನು ನಿಷ್ಕಂಟಕಮಾಡಿಕೊಳ್ಳಬೇಕೆಂದು ಸ್ಥಿರಮಾಡಿಕೊಂಡು ಗಂಡನಿಗೂ ಅತ್ತೆಗೂ ವಿಷವನ್ನು ಹಾಕುವಳು. ವಿಷದೋಷದಿಂದ ಮೃತಪ್ರಾಯನಾಗಿದ್ದ ಗಂಡ ನನ್ನು, ವೈದ್ಯರು ಬಂದು ಪರೀಕ್ಷಿಸುವುದಕ್ಕೆ ಮೊದಲೇ, ಕತ್ತುಹಿಸಿಕಿ ಸಾಯಿಸುವಳು. ಅಲ್ಲಿಂದ ಮುಂದೆ ಯಶೋಧರಚಂದ್ರಮತಿಯರ ಜನ್ಮಗಳ ಕಥೆಯು ಜನ್ನನ ಕಥೆ ಯಲ್ಲಿರುವಂತೆಯೇ ಇದೆ. ಮುಂದೆ ಕಥೆಯು ಬೇರೆಯಾಗಿದೆ. ಇದಿಷ್ಟು ಸೋಮ ದೇವನ ಗ್ರಂಥದಲ್ಲಿರುವ ವೈಶಿಷ್ಟ್ಯ.

## ವಿ ಮ ರ್ಶೆ

"ಯಶಸ್ತಿಲಕ ಮತ್ತು ಹಿಂದೂಸಂಸ್ಕೃತಿಯೆಂಬ ಹೆಸರಿನಿಂದ ಯಶಸ್ತಿಲಕ" ಗ್ರಂಥವನ್ನು ವಿಸ್ತಾರವಾಗಿ ವಿಮರ್ಶಿಸಿರುವ ಶ್ರೀಮಾನ್ Krishna Kantha Mandiqui, M. A., (Cal. et Oxon.) ರವರು ಅಮೃತಮತಿಯ ವಿಚಾರದಲ್ಲಿ "Amritamati is a weakling who cannot help her instincts and lacks the moral strength to resist their power over her life" (ಅಮೃತಮತಿಯು ಮನಸ್ಸಿನ ಪ್ರಲೋಭೆ ಗಳನ್ನು ತಡೆದು ಗೆಲ್ಲುವಷ್ಟು ಮನೋಬಲವಿಲ್ಲದ ಮತ್ತು ಆ ಪ್ರಲೋಭನೆಗಳಿಂದ ತನ್ನ ಜೀವನದ ಗತಿಗುಂಟಾಗುವ ಕೇಡನ್ನು ತಡೆಯುವಂತಹ ನೈತಿಕಬಲವಿಲ್ಲದ ಸ್ತ್ರೀ) ಎಂದು ಅಭಿಪ್ರಾಯಪಟ್ಟಿರುವರು. ಯಶೋಧರನ ಕ್ಷಮಾಗುಣವು ಅಪ್ರತಿಮ ವಾದುದೆಂದು ಹೊಗಳಿರುವರು.

ಯಶೋಧರಚರಿತ್ರೆಯಲ್ಲಿ ಬರುವ ವ್ಯಕ್ತಿಗಳನ್ನು ಕವಿಯು ಹೇಗೆ ಚಿತ್ರಿಸಿರುವ ನೆಂಬುದನ್ನು ನೋಡೋಣ.

ಮೊದಲನೆಯದಾಗಿ ರಾಜ ಮಾರಿದತ್ತನು ಜೈನಧರ್ಮದ ಗಂಧವೇ ಇಲ್ಲದ ವನು. ದಯೆಯೆಂಬುದೇ ಅವನಿಗೆ ತಿಳಿಯದು. ಶಕ್ತ್ಯುಪಾಸಕರಂತೆ ಮಾರಿಮಸಣಿ ಗಳ ಪೂಜೆಯೇ ಸರ್ವಸಿದ್ಧಿಯೆಂದು ನಂಬಿದ್ದವನು. ಸನ್ಮಾರ್ಗವೆಂಬುದನ್ನೇ ಅರಿ ಯದವನು. ಅಭಯರುಚಿ ಹೇಳಿದ ಕಥೆಯೇ ಅವನ ನಡತೆಯ ಮಾರ್ಪಾಟಿಗೆ ಕಾರಣವಾಗಿ ಅವನು ಸನ್ಮಾರ್ಗಕ್ಕೆ ಬಂದವನು. ಧರ್ಮಸ್ವರೂಪವನ್ನು ಕೇಳಿ ತಿಳಿದು ಆತ್ಮಕಲ್ಯಾಣವನ್ನು ಮಾಡಿಕೊಂಡವನು.

ಬಳಿಕ ಯಶೌಘರಾಜ— ಅವನು ಜೈನಧರ್ಮದಲ್ಲಿ ಸಂಪೂರ್ಣ ನಂಬಿಕೆ

ಇದ್ದವನು. ಸಂಸಾರಸುಖವು ನಶ್ವರವಾದುದೆಂದು ತಿಳಿದು ದೀಕ್ಷೆಗೊಂಡು ಸದ್ಗತಿಯನ್ನು ಸಂಪಾದಿಸಿದವನು.

ಮೂರನೆಯವನು ಯಶೋಧರ— ಜೀವದಯೆಯೇ ಪರಮಧರ್ಮವೆಂದೂ ಪ್ರಾಣಿಹಿಂಸೆಯು ಪಾಪಕಾರ್ಯವೆಂದೂ ನಂಬಿದ್ದವನು. ಜೈನಧರ್ಮದ ಸಂಪೂರ್ಣ ಸ್ವರೂಪವನ್ನು ತಿಳಿಯದಿದ್ದವನು. ತನ್ನ ಹೆಂಡತಿಯ ದುರಾಚಾರವನ್ನು ಕಣ್ಣಾರೆ ನೋಡಿದರೂ ಅದಕ್ಕಾಗಿ ಅವಳನ್ನು ಕೊಲ್ಲದೆ ಶಾಂತಿಯಿಂದ ವರ್ತಿಸಿದವನು. ಅಮೃತಮತಿಯ ಅಪರಾಧವೇನೋ ಅಕ್ಷಮ್ಯವಾದುದು. ಅದನ್ನೂ ದಯಾಬುದ್ಧಿಯಿಂದ ಕ್ಷಮಿಸಿದ ಅವನ ತಾಳ್ಮೆಯು ಅತ್ಯಂತಮಹತ್ತಾದುದು. ಇದರಿಂದವನು ಸದ್ಗುಣಶಾಲಿಯೆಂಬುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ಇಷ್ಟಾದರೂ ತನ್ನ ಹೆಂಡತಿಯ ಪಾಪಾಚರಣೆಯನ್ನು ಬಾಯಿಬಿಟ್ಟು ತಾಯಿಯೊಡನೆ ಹೇಳದೇ ಮರೆಮಾಚಿದವನು. ತನಗೆ ತಾಯಿಯಲ್ಲಿದ್ದ ಮಾತೃಭಕ್ತಿಗೆವಶನಾಗಿ, ಅಕಾರ್ಯವೆಂದು ತಿಳಿದೂ, ಹಿಟ್ಟಿನ ಕೋಳಿಯನ್ನು ಬಲಿಗೊಡಲೊಪ್ಪಿ ಬಲಿಯನ್ನು ಕೊಟ್ಟವನು. ಸಾಯುವಾಗ ಕೃತಕ ಕೋಳಿಯು ಕೂಗಿದುದನ್ನು ಕೇಳಿ ಜುಗುಪ್ಸೆಗೊಂಡು ಸಂಸಾರವನ್ನೇ ಬಿಟ್ಟು ಹೊರಡಲನುವಾದವನು. ತಾನು ಪ್ರೀತಿಸುತ್ತಿದ್ದ ಹೆಂಡತಿಯು ಅನ್ಯನಲ್ಲಾಸಕ್ತಳಾಗಿದ್ದರೂ ಬಹಿರಂಗವಾಗವಳನ್ನು ದಂಡಿಸದೆ ತಾನು ತಪಸ್ಸಿಗೆ ಹೊರಡುವಾಗ ದಾಕ್ಷಿಣ್ಯಕ್ಕೊಳಗಾಗಿ ಅವಳ ಆತಿಥ್ಯವನ್ನು ಸ್ವೀಕರಿಸಿದವನು. ವಿಧಿವಿಲಾಸದಿಂದೆಲ್ಲವೂ ವಿರುದ್ಧವಾಗಿ ಪರಿಣಮಿಸಿ ಅನೇಕ ಜನ್ಮಗಳಲ್ಲಿ ಹುಟ್ಟಿ ದುಃಖಾನುಭವ ಮಾಡಬೇಕಾಗಿ ಬಂದಿತು. ಕೊನೆಗೆ ಸದುಪದೇಶವನ್ನು ಹೊಂದಿದಾಗ ಶುದ್ಧಾತ್ಮನಾಗಿ ಮುಕ್ತಿಯನ್ನು ಹೊಂದಿದವನು. ಇಂತಹ ಸದ್ಗುಣವುಳ್ಳವರು ಲೋಕದಲ್ಲಿ ಬಹುಮಂದಿ ಇಲ್ಲವೆಂದು ಹೇಳಬಹುದು.

ಇನ್ನು ಅಮೃತಮತಿ— ಅವಳು ರಾಜನ ಮಗಳಾಗಿ ಹುಟ್ಟಿ, ಅತಿಯಾಗಿ ಪ್ರೀತಿಸಲ್ಪಟ್ಟು ಸ್ವೇಚ್ಛೆಯಾಗಿ ಬೆಳೆದಿದ್ದವಳು. ಚಕ್ರವರ್ತಿಗೆ ಸಮಾನನಾದ ರಾಜನ ರಾಣಿ. ಧರ್ಮ, ಪುಣ್ಯ, ಪಾಪ, ಸನ್ಮಾರ್ಗ, ಸದಾಚಾರ ಒಂದನ್ನೂ ತಿಳಿಯದಿದ್ದವಳು. ವಿವಾಹವಾಗಿ ಗಂಡನ ಮನೆಗೆ ಬಂದಮೇಲೂ ತಾನೇತಾನಾಗಿದ್ದವಳು. ರಾಜನಲ್ಲಿಗೆ ಬಂದಿರಬಹುದಾದ ಸಂಗೀತಗಾರರುಗಳ ಸಂಗೀತವನ್ನು ಕೇಳಿದ್ದವಳು. ಅವಳು ಕೇಳದ ಮಾಳವರಾಗವಿರಲಿಲ್ಲ. ಹಾಗಿದ್ದರೂ ಸಾಮಾನ್ಯನಾದೊಬ್ಬ ಹೀನನಾದ ಮನುಷ್ಯನ ಸಂಗೀತದ ಇಂಪಿಗೆ ಮನಸೋತುದಕ್ಕೇ ಆಶ್ಚರ್ಯವಾಗುತ್ತದೆ. ಅಷ್ಟೇ ಅಲ್ಲ; ಆ ಸಂಗೀತಗಾರನನ್ನು ನೋಡಿ ಕೂಡಲೂ ಸಿದ್ಧಳಾದಳೆಂದರೆ ಅತ್ಯಂತಹಗುರವಾದ ಆತ್ಮಬಲವಿದ್ದವಳೆಂದು ಗೊತ್ತಾಗುತ್ತದೆ. ತಾನು ಮನಸೋತಿದ್ದ ಅಷ್ಟವಂಕನ ಅಸಹ್ಯಕರವಾದ ರೂಪಿನ ವರ್ಣನೆಯನ್ನು ಕೇಳಿದಮೇಲಾದರೂ ಅವಳ ಮೋಹವು ಅಳಿದುಹೋಗಿ ತನ್ನ ಅಕಾರ್ಯಕ್ಕೆ ತಾನೇ ಹೇಸಬೇಕಾಗಿತ್ತು.

ಈ ಸಂದರ್ಭದಲ್ಲಿ ವಂಗಮಹಾಕವಿ ಬಂಕಿಂಚಂದ್ರಚಟ್ಟೋಪಾಧ್ಯಯರು ಹೇಳಿರುವ ಮಾತೊಂದು ಜ್ಞಾಪಕಕ್ಕೆಬರುತ್ತದೆ. "ಚಿತ್ತಸಂಯಮದ ಅಭಾವವೇ ವಿಷವೃಕ್ಷಕ್ಕೆ ಬೀಜ" ವೆಂದು ಹೇಳಿರುವರು. ಈ ಮಾತು ಅಮೃತಮತಿಯ ವಿಷಯ ದಲ್ಲಿ ಚೆನ್ನಾಗಿ ಅನ್ವಯಿಸುತ್ತದೆ. ಅವಳು ತನಗುಂಟಾದ ದಪ್ರಲೋಭನೆಗೊಳಗಾಗದೆ ತನ್ನ ಮನಸ್ಸನ್ನು ತಡೆದಿದ್ದಿದ್ದರೆ ಮುಂದೆ ಉಂಟಾದ ವಿಷಫಲಗಳೆಲ್ಲವೂ ತಪ್ಪುತ್ತಿ ದ್ದುವು. ತನ್ನ ಪತಿಯಾದ ರಾಜನ ವಿಷಯದಲ್ಲಿ ತನ್ನ ಕರ್ತವ್ಯವೇನೆಂಬುದನ್ನು ಸ್ವಲ್ಪವೂ ಯೋಚಿಸದೆ ತನ್ನ ಪತಿಗೆ ದ್ರೋಹಮಾಡಿದುದಷ್ಟೇ ಏಕೆ ಪತಿವಧೆಗೂ ಸಿದ್ಧಳಾಗಿ ಅವನನ್ನು ವಿಷಹಾಕಿ ಕೊಂದಳು. ಅವಳು ಅತ್ಯಂತಉಚ್ಛೃಂಖಲ ಸ್ವಭಾ ವದವಳಾಗಿದ್ದುದರಿಂದ ತಾನು ಮಾಡುವುದೇ ಸರಿಯೆಂದು ತೀರ್ಮಾನಿಸಿಕೊಂಡು ಮುನ್ನುಗ್ಗಿದಳು. ತನ್ನ ಗುಪ್ತಪ್ರಣಯದಿಂದುಟಾಗಬಹುದಾದ ಅವಮಾನ, ಅಪ ಯಶಸ್ಸು ಇವುಗಳನ್ನು ಕುರಿತು ಅವಳು ಸ್ವಲ್ಪವೂ ಯೋಚಿಸುವ ಪ್ರಯತ್ನವನ್ನು ಸಹ ಮಾಡಲಿಲ್ಲ. ತನ್ನ ಅರಸಿತನ, ಪತಿಯಮೇಲಿನ ಪ್ರೀತಿ, ಆಸ್ಥಾನದ ಗೌರವ, ತನ್ನ ಪುತ್ರನಲ್ಲಿದ್ದಿರಬೇಕಾದ ಪ್ರೀತಿ ಇವೊಂದನ್ನೂ ಅವಳು ಲೆಕ್ಕಿಸಲಿಲ್ಲ. ಲೋಕ ದಲ್ಲಿ ತಪ್ಪುಮಾಡದವರಿಲ್ಲ. ಆದರೆ ಅರಿಯದೆ ಮಾಡುವ ತಪ್ಪಿಗೂ ಅರಿತುಮಾಡುವ ತಪ್ಪಿಗೂ ಅಂತರವುಂಟು. ತಿಳಿದವರು ಮಾಡುವ ತಪ್ಪು ಗುರುತರವಾದುದಾಗುತ್ತದೆ.

ಹಾಗೆಯೇ ರಾಜನನ್ನು ಮದುವೆಯಾಗಿ ರಾಣಿಯಾಗಿದ್ದು ವಂಶೋದ್ಧಾರಕ ನಾದ ಪುತ್ರನನ್ನು ಪಡೆದು ಇಂತಹ ಕುತ್ಸಿತವಾದ ಕಾರ್ಯಕ್ಕೆ ಮನಸ್ಸುಕೊಟ್ಟ ಅಮೃತಮತಿಯ ಅಪರಾಧವು ಎಷ್ಟು ಗುರುತರವಾದುದೆಂಬುದನ್ನು ತೋರಿಸುವು ದಕ್ಕಾಗಿಯೇ ಕವಿಯು "ಅವಳಣಕಕ್ಕೆ ಸವಣನುಂ ಸ್ವೈರಿಪನೇ" ಎಂದು ಹೇಳಿರು ವನು. ತಪ್ಪುಮಾಡಿದವರ ವಿಷಯದಲ್ಲಿ ಎಷ್ಟುಕೋಪ ಉಂಟಾದರೂ ಒಂದೊಂದು ವೇಳೆ ಅಂತಹವರಲ್ಲಿ ಅನುಕಂಪೆ ಬರುವುದುಂಟು. ಆದರೆ ಅಮೃತಮತಿಯ ವಿಚಾ ರದಲ್ಲಂತಹ ಮರುಕವುಂಟಾಗುವುದಿಲ್ಲ. ಕವಿಯು ಅವಳು ಅಷ್ಟವಂಕನೊಡನೆ ಮಾತನಾಡುವಾಗ "ಅರಸನೆಂಬಪಾತಕ" ನೆಂದು ಹೇಳಿದಳೆಂದು ಹೇಳಿಸಿ ಅವಳೆಷ್ಟು ಹೀನವಾದ ಸ್ಥಿತಿಗಿಳಿದಿದ್ದಳೆಂದು ತೋರಿಸಿರುವನು. ಒಂದು ಕಡೆ ಅವಳನ್ನು "ಪಾದರಿ" ಎಂದೂ ಕರೆದಿರುವನು. ಈ ಸಂದರ್ಭದಲ್ಲಿ ಕವಿಗೂ ಅವಳ ವಿಷಯ ದಲ್ಲಿ ಅನುಕಂಪೆಯಿಲ್ಲವೆಂಬುದನ್ನು ತೋರಿಸಲು ಮಾರಿದತ್ತನ ಬಾಯಿಂದ "ಆ ಗಂಡನನಪ್ಪಿದತೋಳ್ । ಪೋಗಂಡನನಪ್ಪುವಂತೆಮಾಡಿದ ವಿಧಿಯಂ ॥ ಮೂಗಂ ಕೊಯ್ದಿಟ್ಟಿಗೆಯಿಂ । ಪೋಗೊರಸದೆ ಕಂಡೆನಾದೊಡೇಂ ಬಿಟ್ಟಪೆನೇ ॥" ಎಂದು ಹೇಳಿಸಿರುವನು. ಒಟ್ಟಿನಲ್ಲಿ ಅಮೃತಮತಿಯು, ಹೇಯೋಪಾದೇಯಗಳನ್ನು ತಿಳಿದು ಕೊಳ್ಳಲಾರದ, ನೈತಿಕ ಶಿಕ್ಷಣವೇ ಇಲ್ಲದ, ಸ್ವೇಚ್ಛಾಚಾರಿಯಾಗಿದ್ದ, ದುರ್ಗುಣಿ ಯಾದ ಮತ್ತು ಗರ್ವಿತೆಯಾದ ಹೆಂಗಸಾಗಿದ್ದಳೆಂದು ಮಾತ್ರ ಹೊಳೆಯುತ್ತದೆ. ಇದ

ರಲ್ಲಿ ದುಃಖವಿಷಯವೇನೆಂದರೆ, ತಾನು ಮಾಡಿದ ದುಷ್ಕಾರ್ಯದ ಫಲವನ್ನು ತಾನೊಬ್ಬಳೇ ಅನುಭವಿಸದೆ ಗಂಡಅತ್ತೆಯರನ್ನೂ ಅನೇಕ ಜನ್ಮಗಳು ದುಃಖಾನುಭವ ಮಾಡುವಂತೆಯೂ ಮಾಡಿದಳು. "ಬುದ್ಧಿಃ ಕರ್ಮಾನುಸಾರಿಣೀ" ಎಂಬಂತೆ ಅವ್ಳ ತಮತಿಗುಂಟಾದ ನೀಚಕಾರ್ಯಪ್ರವೃತ್ತಿಯು ಅವಳ ಜನ್ಮಾಂತರದ ಪಾಪಕರ್ಮೋದಯದಿಂದುಂಟಾಯಿತೆಂದು ಹೇಳಿಕೊಂಡು, ಅವಳನುಭವಿಸಿದ ದುಃಖಪರಂಪರೆಯನ್ನು ನೋಡಿ ಅವಳಲ್ಲಿ ಮರುಕವನ್ನು ತೋರಿಸಬೇಕಾಗುತ್ತದೆ. ಅವಳು ತನ್ನ ದುಷ್ಕಾರ್ಯದ ಫಲವಾಗಿ ಕುಷ್ಠಾದಿ ಅಸಹ್ಯರೋಗಗಳಲ್ಲಿ ನರಳಿ ಸತ್ತು ಕೊನೆಗೆ ನರಕವನ್ನು ಹೊಕ್ಕಳು. ಇದನ್ನೆಲ್ಲಾ ನೋಡಿದರೆ ವಿಧಿಯು ಪ್ರತಿಕೂಲವಾದರೆ ಎಂತಹ ಅಸಂಭವ ಘಟನೆಯಾದರೂ ಉಂಟಾಗುವುದೆಂದು ತಿಳಿದುಕೊಳ್ಳಬೇಕಾಗುತ್ತದೆ.

ಸ್ತ್ರೀಯರು ಸ್ವಭಾವವಾಗಿ ಸಂಗೀತಕ್ಕೆ ಮೋಹಿಸತಕ್ಕವರೆಂಬ ಭಾವವು ವೇದಗಳ ಕಾಲದಲ್ಲೇ ಇತ್ತೆಂದು "ಗಾಯಂತಂ ಸ್ತ್ರೀಯಃ ಕಾಮಯಂತೇ" ಎಂದು ತೈತ್ತರೀಯಸಂಹಿತೆಯಲ್ಲಿ (೬ ೧-೬) ಹೇಳಿದೆಯಂತೆ. ಆದರೂ ಇಂತಹ ಅನುಚಿತ ಮತ್ತು ಹೇಯವಾದ ಪ್ರಣಯದ ಕಥೆಗಳು ಬಹಳ ವಿರಳವೆಂದು ತೋರುತ್ತದೆ.

ಬಳಿಕ ಚಂಡಕರ್ಮ— ದಯೆಯೆಂಬುದನ್ನೇ ಅರಿಯದ ಕುಶಲಬುದ್ಧಿಯುಳ್ಳ ಪುಣ್ಯಪಾಪಗಳೇನೆಂಬುದನ್ನೇ ತಿಳಿಯದ ಸಾಮಾನ್ಯ ಮನುಷ್ಯನಾಗಿದ್ದರೂ ಕಾಲಲಬ್ಧಿಯಿಂದ ಲಭಿಸಿದ ಶ್ರೀಧರಾಚಾರ್ಯರ ಸದುಪದೇಶದಿಂದ ಧರ್ಮಸ್ವರೂಪವನ್ನು ತಿಳಿದುಕೊಂಡು ತನ್ನ ಪುಣ್ಯದ ಫಲವಾಗಿ ಸನ್ಮಾರ್ಗವನ್ನು ಹೊಂದಿ ಉತ್ತಮವಾದ ಗತಿಯನ್ನು ಪಡೆದುಕೊಂಡನು. ಅವನು ಆತ್ಮಸ್ವರೂಪವನ್ನು ತಿಳಿಯಲು ತನ್ನ ಗುರುಗಳೊಡನೆ ಮಾಡುವ ಚರ್ಚೆಯೇ ಅವನ ಕುಶಲಬುದ್ಧಿಯನ್ನು ತೋರಿಸುತ್ತದೆ.

ಕೊನೆಯವನು ಯಶೋಮತಿ— ದಯಾಹೀನನಾದ, ಧರ್ಮಸ್ವರೂಪವನ್ನರಿಯದ, ವೈದಿಕಬ್ರಾಹ್ಮಣರು ಹೇಳಿದುದನ್ನೇ ಧರ್ಮವೆಂದು ನಂಬಿದ್ದ ರಾಜನಾಗಿದ್ದರೂ ಕೊನೆಗೆ ಸದ್ಧರ್ಮಸ್ವರೂಪವನ್ನು ತಿಳಿದು ಅದರಂತೆ ನಡೆದು ಸದ್ಗತಿಯನ್ನು ಹೊಂದುವನು.

ಹೀಗೆ ಜನ್ನನು ಭಿನ್ನಭಿನ್ನಸ್ವಭಾವವುಳ್ಳ ವ್ಯಕ್ತಿಗಳನ್ನು ಬಹುರಮ್ಯವಾಗಿ ಚಿತ್ರಿಸಿದ್ದಾನೆ. ಕಥೆಯು ಸಣ್ಣದಾದರೂ ಕವಿಯು ಬಹಳ ಸೊಗಸಾಗಿ ಹೊಂದಿಸಿಕೊಂಡು ಬರೆದಿರುವನು. ಅವನು ಕಥೆಯನ್ನು ಸಾಗಿಸಿಕೊಂಡು ಹೋಗುವ ರೀತಿಯೂ, ಅರ್ಥವತ್ತಾದ ರಸಾಲಂಕಾರಗಳಿಂದಕೂಡಿದ ಕಂದಗಳೂ ಮನೋಹರವಾಗಿವೆ. ಸರಳವಾಗಿ ಹೆಣೆದ ಸುಲಭವಾದ ಪದಗಳಿಂದ ಸೇರಿಸಲ್ಪಟ್ಟಿರುವ ಕವಿಯ ಶೈಲಿಯು ಅಸಾಮಾನ್ಯವಾದುದಾಗಿದೆ. ಓದಿದಾಗ ಅರ್ಥವು ಮನಸ್ಸಿಗೆ ಹೊಳೆದರೂ ಪದ್ಯಗಳನ್ನು

ಸಮನ್ವಯಮಾಡುವುದು ಸುಲಭವಲ್ಲ. ಕಥೆಯನ್ನು ಓದಿದರೆ ಮನಸ್ಸಿಗೆ ಬಹಳ ಆನಂದವುಂಟಾಗುತ್ತದೆ.

ಈ ಯಶೋಧರಚರಿತ್ರೆಯ ಕಥೆಯು, ಹಿಂಸೆಯು ಎಲ್ಲಾ ಪಾಪಕಾರ್ಯಗಳಲ್ಲಿ ಅತ್ಯಂತಘೋರವಾದುದೆಂದೂ, ಅದರಲ್ಲೂ ಸಂಕಲ್ಪಹಿಂಸೆಯೂ ಅತ್ಯಂತಪಾಪ ಕಾರ್ಯವೆಂದೂ ಮನಸ್ಸಿಗೆ ಚೆನ್ನಾಗಿ ನಾಟುವಂತೆ ಬೋಧಿಸುತ್ತದೆ. ಇಷ್ಟೇ ಅಲ್ಲದೆ ಇನ್ನೂ ಅನೇಕ ನೀತಿಗಳೂ ಮನಮುಟ್ಟುವಂತೆ ವರ್ಣಿಸಲ್ಪಟ್ಟವೆ. ಜೈನಧರ್ಮದ ಆತ್ಮಸ್ವರೂಪವೇ ಮೊದಲಾದ ಕೆಲವು ರಹಸ್ಯಗಳು ಮನೋಹರವಾಗಿಯೂ ಸುಲಭ ವಾಗಿಯೂ ತಿಳಿಯುವಂತೆ ವರ್ಣಿತವಾಗಿವೆ. ಆಸಕ್ತಿಯಿಂದ ಓದಿದರೆ ಮನಸ್ಸಿನ ಮೇಲೆ ಒಳ್ಳೆಯ ಪರಿಣಾಮವುಂಟಾಗುತ್ತೆಂದು ಧಾರಾಳವಾಗಿ ಹೇಳಬಹುದು.

ಈ ಗ್ರಂಥವು ವೈದಿಕಬ್ರಾಹ್ಮಣರಲ್ಲಿ ಆಚರಣೆಯಲ್ಲಿದ್ದ, ಧರ್ಮಾನುಷ್ಠಾನ ಕಾರ್ಯಗಳೆನಿಸಿಕೊಂಡಿದ್ದ ಪಶುಯಜ್ಞ, ಜೀವಶ್ರಾದ್ಧ ಮತ್ತು ಸಾಮಾನ್ಯ ಜನರು ಮಾಡುತ್ತಿದ್ದ ಪ್ರಾಣಿಬಲಿ ಪಿಷ್ಟಪಶುಯಾಗ ಮೊದಲಾದುವುಗಳನ್ನು ನಿರಾಕರಿಸಿ ಅವುಗಳ ನಿಕೃಷ್ಟತೆಯನ್ನು ತೋರಿಸುವುದಕ್ಕಾಗಿ ಬರೆಯಲ್ಪಟ್ಟಿರಬೇಕೆಂದು ಕಾಣು ತ್ತದೆ.

ಈ ಕಥೆಯಲ್ಲಿ ಅಮೃತಮತಿಯ ಹೇಯವಾದ ಪ್ರಣಯಕಥೆಯೇನೂ ಅಷ್ಟು ಮುಖ್ಯವಾದುದಲ್ಲ. ಸಂಕಲ್ಪಹಿಂಸೆಯೂ (ಕೊಲ್ಲುವೆನೆಂಬ ಮನೋನಿಶ್ಚಯವೇ) ಪ್ರಾಣಿವಧೆಗೆ ಸಮನಾದ ಪಾಪಕಾರ್ಯವಾಗಿ ಪರಿಣಮಿಸಿ ಅನೇಕ ದುಃಖಗಳಿಗೆ ಕಾರಣವಾಗುತ್ತದೆ ಎಂದು ತೋರಿಸುವುದೇ ಕಥೆಯ ಮುಖ್ಯೋದ್ದೇಶವಾಗಿದೆ. ಇದನ್ನು ಸಾಧಿಸುವುದಕ್ಕಾಗಿ ಇತರ ಸನ್ನಿವೇಶಗಳು ಹಿನ್ನೆಲೆಯಾಗಿ ಜೋಡಿಸಲ್ಪ ಟ್ಟವೆ. ಕಥೆಯು ಬರೆಯಲ್ಪಟ್ಟಿರುವ ರೀತಿಯಿಂದಾ ಉದ್ದೇಶವು ಸಫಲವಾಗಿದೆ.

ಅತಿಪರಿಚಿತವಾದುದಾಗಿದ್ದರೂ ನನ್ನ ಶಕ್ತಿಗೆ ತಕ್ಕಂತೆ ಈ ಗ್ರಂಥದ ಪದ್ಯಗ ಳಿಗೆ ಹೊಸಗನ್ನಡದಲ್ಲಿ ತಾತ್ಪರ್ಯವನ್ನು ಬರೆದು ಕನ್ನಡಿಗರ ಮುಂದಿಟ್ಟಿದ್ದೇನೆ.

ಈ ನನ್ನ ಸಂಪಾದಕ ಕಾರ್ಯದಲ್ಲಿ, ತಮ್ಮಲ್ಲಿದ್ದ ಪ್ರತಿಗಳನ್ನು ಕೊಟ್ಟು ಸಂಶೋಧನಾಕಾರ್ಯದಲ್ಲಿ ಮತ್ತು ತಾತ್ಪರ್ಯವನ್ನು ಬರೆಯುವುದರಲ್ಲಿ ನನಗೆ ಸಹಾಯಮಾಡಿದವರು ನನ್ನ ಪರಮ ಸ್ನೇಹಿತರಾದ ಮ|| ರಾ|| ರಾ|| ಪಂಡಿತರು **ಹೆಚ್. ಶೇಷಯ್ಯಂಗಾರ್ಯರು.** ಇವರು, ಮದರಾಸು ಯೂನಿವರ್ಸಿಟಿಯಲ್ಲಿ ಕನ್ನಡ ಲೆಕ್ಚರರಾಗಿದ್ದು, ಪೊನ್ನನ ಶಾಂತಿಪುರಾಣ, ಗುಣವರ್ಮನ ಪುಷ್ಪದಂತ ಪುರಾಣ, ಕರ್ಣಪಾರ್ಯನ ನೇಮಿನಾಥಪುರಾಣ, ನಾಗವರ್ಮನ ಅಭಿದಾನಕೋಶ ಓಷಧಿಕೋಶ, ಖಗೇಂದ್ರಮಣಿದರ್ಪಣ ರಟ್ಟಮತ ಮೊದಲಾದ ಜೈನಗ್ರಂಥಗಳಿಗೆ ಸಂಪಾದಕರಾಗಿ ಮುದ್ರಿಸಿ ಪ್ರಕಟಿಸಿರುತ್ತಾರೆ. ಇನ್ನೂ ಕೆಲವು ಜೈನಗ್ರಂಥಗಳನ್ನು

ಮುದ್ರಣಕ್ಕೆ ಸಿದ್ಧಪಡಿಸಿರುವರು; ಅವುಗಳನ್ನು ಸಂಘದವರಿಗೆ ಕೊಡುವುದಾಗಿ ಭರವಸೆಯನ್ನು ಕೊಟ್ಟಿರುವರು. ಇವರಿಗೆ ಸಂಸ್ಕೃತ ಮತ್ತು ಹಳಗನ್ನಡಗಳೆರಡರಲ್ಲಿಯೂ ಒಳ್ಳೆಯ ಪಾಂಡಿತ್ಯವಿದೆ. ಈ ರೀತಿ ಇವರು ಜೈನಸಾಹಿತ್ಯಕ್ಕೆ ಮಾಡಿರುವ ಸೇವೆಯು ಅಪಾರವಾಗಿದೆ. ಇದರಿಂದ ಜೈನಸಮಾಜದವರ ಪರವಾಗಿಯೂ, ಜೈನ ಸಾಹಿತ್ಯ ಪ್ರಚಾರಸಂಘದವರ ಪರವಾಗಿಯೂ ನಾನು ಮ॥ ರಾ॥ ರಾ॥ ಅಯ್ಯಂಗಾರ್ಯರಿಗೆ ಹೃತ್ಪೂರ್ವಕವಾದ ಕೃತಜ್ಞತೆಯನ್ನರ್ಪಿಸುತ್ತೇನೆ.

ಈ ಮುನ್ನುಡಿಯನ್ನು ಬರೆಯುವುದರಲ್ಲಿ ನನಗೆ ಸಹಾಯವಾದ ಯಶೋಧರಚರಿತ್ರೆಯ ಮುದ್ರಿತ ಪುಸ್ತಕಗಳು, ಕವಿಚರಿತ್ರೆ, ವಾದಿರಾಜನ ಯಶೋಧರ ಚರಿತ್ರೆ, "ಯಶಸ್ತಿಲಕ ಮತ್ತು ಹಿಂದೂಸಂಸ್ಕೃತಿ" ಈ ಗ್ರಂಥಗಳ ಕರ್ತರು ಮತ್ತು ಸಂಪಾದಕರಾದ ಮಹನೀಯರುಗಳೆಲ್ಲರಿಗೂ ನನ್ನ ವಂದನೆಗಳು.

ಈ ಕಾರ್ಯವು ದೊಡ್ಡಪಂಡಿತರುಗಳಿಂದ ಮಾಡಲ್ಪಡತಕ್ಕುದಾಗಿದೆ. ನಾನು ಕೇವಲ ಸಾಹಿತ್ಯಾಭಿಮಾನದಿಂದ ಇಂತಹ ಮಹತ್ಕಾರ್ಯಕ್ಕೆ ಕೈಹಾಕಿ ನನ್ನ ಶಕ್ತಿಗೆ ತಕ್ಕಂತೆ ನಿರ್ವಹಿಸಿರುತ್ತೇನೆ. ಸಹೃದಯರಾದ ಪಾಠಕರು ಇದರಲ್ಲಿ ಇರಬಹುದಾದ ತಪ್ಪುಗಳನ್ನು ದಯೆಯಿಟ್ಟು ತಿಳಿಸಿದರೆ ಮುಂದಿನ ಮುದ್ರಣದಲ್ಲಿ ಸರಿಪಡಿಸಿಕೊಳ್ಳುವೆನು.

ಈ ಕಾರ್ಯವನ್ನು ವೈನಾಡಿನ ಮರದೂರಿನಲ್ಲಿರುವ ಧರ್ಮಾತ್ಮರಾದ ಶ್ರೀಮಾನ್ ಕಡೇಮನೆ **ವಿ. ಕೆ. ವರ್ಧಮಾನಯ್ಯ** ಎಂಬುವವರಿಗಾಗಿ ಮಾಡಿಕೊಟ್ಟಿರುತ್ತೇನೆ.

ತಾ॥ 6–4–1951<br>ಮೈಸೂರು

ಇತಿ ಸಜ್ಜನವಿಧೇಯ<br>ಎಸ್. ಬೊಮ್ಮರಸಪಂಡಿತ

# ವಾದಿರಾಜ ಜನ್ನರ ಗ್ರಂಥಗಳಲ್ಲಿ ಹೋಲಿಕೆಯುಳ್ಳ ಪದ್ಯಗಳಲ್ಲಿ ಕೆಲವು

| ವಾದಿರಾಜನ ಶ್ಲೋಕ | ಜನ್ನನ ಕಂದ |
|---|---|
| ೧. ಅಶ್ವಾಸಯಂತಾವನ್ಯೋನ್ಯ<br>ಮಿತಿ ತೌ ರಾಜಪುತ್ರಕೌ ।<br>ಆಸೇದತುರನಾಶಂಕೌ<br>ಚಂಡಮಾರೀ ನಿಕೇತನಂ ॥ [ಸರ್ಗ ೧, ಶ್ಲೋಕ ೪೧ | ಅಂತೋರೊರ್ವರ್ ನೊರ್ವರ್ ।<br>ಸಂತೈಸುತ್ತುಂ ನೃಪೇಂದ್ರತನುಜಾತರ್ ನಿ ॥<br>ಶ್ಚಿಂತಂ ಪೊಕ್ಕರ್ ಪಸಿದಕ್ಕೃ ।<br>ತಾಂತನ ಬಾಣಸುವೊಲಿರ್ದ ಮಾರಿಯ ಮನೆಯಂ ॥ [ಅ. ೧, ಕಂ. ೫೩ |
| ೨. ವಹನ್ನ ಹಿಶ್ಚಾರುಗವಾಕ್ಷರಂಧ್ರೈ<br>ರಾಮೋದಿತಾಂತರ್ಭವನಸ್ತದಾನೀಂ ।<br>ಕಪೋತಪಕ್ಷಚ್ಛವಿರುಜ್ಜ್ವ ಜೃಂಭೇ<br>ನಿಹಾರಿಕಾಲಾಗರುಪಿಂಡಧೂಮಃ ॥ [ ೨, ೨೩ | ಪರಿಮಳದ ತೂಂಬನೆತ್ತಿದ ।<br>ನರಲಂಬಂ ಜನಮನೋವನಕ್ಕೆನೆ ಕಾಳಾ ॥<br>ಗರುಧೂಮುಲತಿಕೆ ಜಾಲಾಂ ।<br>ದರದಿಂದೊಗೆದುದು ಕಪೋತಪಕ್ಷಚ್ಛುರಿತಂ ॥ [ ೨, ೧೯ |
| ೩. ಯತ್ರಸ್ಯಗಾಢಂ ಪರಿರಂಭಣೇಚ್ಛಾಂ<br>ಬಬಂಧ ಪೂರ್ವಂ ಕೃತರಾಗಬುದ್ಧೇಃ ।<br>ತದೇವ ತಸ್ಯಾಃ ಸ್ತನಯೋಸ್ತದಾನೀಂ<br>ಕಾರ್ಕಶ್ಯಮುದ್ವೇಜನಮಾಜಹಾರ ॥ [ ೨, ೬೧ | ಮುಟ್ಟಿದೊಡೆ ಸುಖದ ಸೋಂಕಂ ।<br>ಪುಟ್ಟಿಸುವಾ ವಾಮೆ ವಾಮೆಯಾದೊಡೆ ಮುನ್ನಂ ॥<br>ಬಟ್ಟಿದುವೆನಿಸುವ ಮೊಲೆ ನಿ ।<br>ರ್ವಟ್ಟಿದುವಾದುವು ನೃಪಂಗೆ ಬೆರ್ಚೆ ಸೋಂಕಲೊಡಂ ॥ [ ೨, ೫೮ |
| ೪. ಚಂದ್ರಮತ್ಯಪಿ ಮೃತಾ ಕರಹಾಟೇ<br>ಕುಕ್ಕುರಃ ಪುರವರೇ ಪರಿಜಜ್ಞೇ ।<br>ಆಸದತ್ಸ್ವನರುಪಾಯನಭೂತೌ<br>ತಾವುಭಾವಪಿ ಯಶೋಧರಭೂಪಃ ॥ [ ೩, ೩೭ | ಕರಹಟದೊಳ್ ಬೇಂಟೆಯ ಕು ।<br>ಕ್ಕುರಿಯಾದಳ್ ಸತ್ತು ಚಂದ್ರಮತಿಯುಂ ಬಟ್ಟಿಕಾ ॥<br>ೞೆರಡುಮುಪಾಯನಘಟನೆಯಿ ।<br>ನರಮನೆಯಂ ಸಾರ್ದುವಾ ಯಶೋಧರಸುತನಾ ॥ [ ೩, ೩೮ |

## ವಾದಿರಾಜನ ಶ್ಲೋಕ

೫. ........ಅಭ್ಯೈರಂಸ್ತ ನಿಜಯೈವಜನನ್ಯಾ
ಕಾತರಸ್ಮರಶರಗ್ಲಪಿತಾಂಗಃ ॥ [ ೩, ೫೩
ತಂತಯಾರತಿಕೃತಂಪುನರನ್ಯೇ
ಬರ್ಕರಸ್ತ್ವರಿತಮೇತ್ಯಜಘಾನ ॥ [ ೩, ೫೪

೬. ಪ್ರಮಾಯ ಭಸ್ತ್ರಾಂ ತುಲಯಾ ಪುನಶ್ಚ ತಾಂ
ಪ್ರಪೂರ್ಣವಾಯುಪ್ರಮಿತಾಂ ವಿಲೋಕರ್ಯ |
ಪ್ರಮಾಣಭೇದೋಽತ್ರ ನ ದೃಶ್ಯತೇ ಯಥಾ
ತಯೋಃ ಪೃಥಕ್ತ್ವೇಽಪಿ ತಥೈವ ನಿಶ್ಚಿತಂ ॥ [ ೪, ೧೯

೭. ಸ ಏವ ಕರ್ತಾ ಖಲು ಪುಣ್ಯ ಪಾಪಯೋಃ
ಸ ಏವ ಭೋಕ್ತಾ ಸುಖದುಃಖಯೋಸ್ತಥಾ |
ಉಪಾಯಸಿದ್ಧ್ಯಾ ಪರಿಭಾವಿತಃ ಪುನಃ
ಸ ಏವ ತತ್ಕರ್ಮಮಲೈರ್ವಿಮುಚ್ಯತೇ ॥ [ ೪, ೨೨

೮. ಪೂಜಯಂತು ಶುಚಿಭಿಃ ಕುಸುಮಾದ್ಯೈ
ರ್ಮಾಮಿತಃ ಪ್ರಭೃತಿ ಮತ್ಪದಭಕ್ತಾಃ |
ಕುರ್ವತಸ್ತು ವಧಮತ್ರ ಕುಟುಂಬಂ
ನಶ್ಯತೀತ್ಯಭಿನಿವೇದ್ಯ ತಿರೋಽಭೂತ್ ॥ [ ೪, ೬೬

## ಜನ್ನನ ಕಂದ

ಬಿದೆಯಾದ ತಾಯನೇೞಿದು |
ದದು ಸೊರ್ಕಿದ ಗೂಳಿ ತಾಯನೇೞ್ತ್ರಿಂಬಂ ॥
ದದೆ ಮತ್ತ್ರಮೊಂದು ಬಸ್ತಕ |
ಮದನಿೞಿಯಲ್ ಸತ್ತು ಪೊಕ್ಕುದಜೆಯೊಳ್ ಜೀವಂ ॥ [ ೩, ೫೪

ತೀವಿದ ತಿದಿಯಂ ತೂಗಿಯು |
ಮಾವಾಯುವನಿೞಿಪಿ ತೂಗೆ ಕುಂದದ ತಿದಿಯಿಂ ॥
ದಾವಾಯು ಬೇರೆ ತನುವಿಂ |
ಜೀವಂ ಬೇರೆಂದು ಮಗನೆ ಭಾವಿಸಿ ನೋಡಾ ॥ [ ೪, ೨೫

ಮಾಡುವವನಾತ್ಮ ನೆಟ್ಟನೆ |
ಮಾಡಿದುದುಣ್ಬಾತನಾತ್ಮನಘಜಲಧಿಯೊಳೋ ॥
ಲಾಡುವೊಡಂ ಗುಣಗಣದೊಳ್ |
ಕೂಡುವೊಡಂ ಜನ್ಮಜಲಧಿಯಂ ದಾಂಟುವೊಡಂ ॥ [ ೪, ೨೮

ಪ್ರಜೆಯೆಲ್ಲಂ ಜಲಗಂಧ |
ಸ್ರಜತಂಡುಲಧೂಪದೀಪಚರುತಾಂಬೂಲ ॥
ವ್ರಜದಿಂ ಪೂಜಿಸುವುದು ಜೀ |
ವಜಾತದಿಂದೆನಗೆ ಬಲಿಯನಿತ್ತೊಡೆ ಮುನಿವೆಂ ॥ [ ೪, ೬೩

ಶ್ರೀ

ಶ್ರೀ ಮುನಿಸುವ್ರತಜಿನೇಂದ್ರಾಯ ನಮಃ

ಕವಿಚಕ್ರವರ್ತಿ

# ಜನ್ನಮಹಾಕವಿಪ್ರಣೀತಂ

# ಯಶೋಧರಕಾವ್ಯಂ

—o—

—:ಕಂದ:—

ಪುರುದೇವಾದಿಗಳೊಲಿಸಿದ।
ಪರಮಶ್ರೀವಧುವನೊಲಿಸಿಯುಂ ಪರವನಿತಾ॥
ನಿರಪೇಕ್ಷಕನೆನಿಸಿದ ದೇ।
ವರ ದೇವಂ ಕುಡುಗೆ ಸುವ್ರತಂ ಸುವ್ರತಮಂ॥ ೧

ಜಿನಸಿದ್ಧಸೂರಿದೇಶಿಕ।
ಮುನಿಗಳಚರಣಂಗಳೆಂಬ ಸರಸಿಜವನವಿಾ॥
ಮನವೆಂಬ ತುಂಬಿಯೆೞಕಮ।
ನನುಕರಿಸುಗೆ ಭಕ್ತಿಯೆಂಬ ನವಪರಿಮಳದಿಂ॥ ೨

---

-:ತಾತ್ಪರ್ಯ:—

೧. ಆದಿಜಿನೇಂದ್ರರೇ ಮೊದಲಾದ ತೀರ್ಥಂಕರರು ಒಲಿಸಿದ ಮೋಕ್ಷಲಕ್ಷ್ಮಿ ಯನ್ನು ಒಲಿಸಿಕೊಂಡರೂ "ಪರವನಿತಾನಿರಪೇಕ್ಷಕ" (ಇನ್ನೊಬ್ಬರ ಸ್ತ್ರೀ ಯನ್ನುಅಪೇಕ್ಷಿಸದಿರವವನು) ನೆಂದು ಹೊಗಳಿಸಿಕೊಳ್ಳುವ ಮುನಿಸುವ್ರತ ತೀರ್ಥಂಕರನು ನಮಗೆ ಒಳ್ಳೆಯ ವ್ರತಬುದ್ಧಿಯನ್ನು ಕೊಡಲಿ.

೨. ಅರ್ಹಂತರು ಸಿದ್ಧರು ಆಚಾರ್ಯರು ಉಪಾಧ್ಯಾಯರು ಸರ್ವಸಾಧು ಗಳು ಈ ಪಂಚಪರಮೇಷ್ಠಿಗಳ ಪಾದಗಳೆಂಬ ತಾವರೆವನವನ್ನು ನಮ್ಮ ಮನ ಸ್ಸೆಂಬ ದುಂಬಿಯು ಭಕ್ತಿಯೆಂಬ ಪರಿಮಳಕ್ಕಾಗಿ ಎರಗುವಂತಾಗಲಿ–ಭಕ್ತಿ ಪೂರ್ವಕವಾಗಿ ನಮಸ್ಕರಿಸುವಂತಾಗಲಿ.

ಎನಗೆ ನಿಜಮಹಿಮೆಯಂ ನೆ।
ಟ್ಟನೆ ಮಾಡುಗೆ ಕೂರ್ತು ವೀರಸೇನಾಚಾರ್ಯರ್॥
ಜಿನಸೇನಾಚಾರ್ಯರ್ಸಿಂ।
ಹನಂದಿಗಳ್ ಸಂದ ಕುಂಡಕುಂದಾಚಾರ್ಯರ್॥ ೩

ಗಣಧರರೋ ಸ್ವಾಮಿಗಳೋ।
ಗುಣದಿಂದಾಮಱಿಯೆಮೆಱಗಿ ಶುದ್ಧರೆಮೆಮ್ಮಂ॥
ತಣಿಪುಗೆ ಸಮಂತಭದ್ರರ।
ಗುಣಭದ್ರರ ಪೂಜ್ಯಪಾದರಾಖ್ಯಾನಂಗಳ್॥ ೪

ಕ್ಷಿತಿಯೊಳ್ ಸಂಸ್ಕೃತದಿಂ ಪ್ರಾ।
ಕೃತದಿಂ ಕನ್ನಡದಿನಾದ್ಯರಾರೀಕೃತಿಯಂ॥
ಕೃತಿಮಾಡಿದರವರ್ಗಳ ಸ।
ನ್ಮತಿ ಕೈಗುಡುಗೆಮಗೆ ಸರಸಪದಪದ್ಧತಿಯೊಳ್॥ ೫

ನಾಂದಿಯಿನನಂತರಂ ಕವಿ।
ವೃಂದಾರಕವಾಸವಂಗೆ ಕವಿಕಲ್ಪಲತಾ॥
ಮಂದಾರಂಗೇಂ ಪ್ರಸ್ತುತ।
ಮೆಂದೊಡೆ ಬಲ್ಲಾಳದೇವನನ್ವಯಕಥನಂ॥ ೬

---

೩. ವೀರಸೇನಾಚಾರ್ಯರು, ಜಿನಸೇನಾಚಾರ್ಯರು, ಸಿಂಹನಂದಿಗಳು, ಪ್ರಸಿದ್ಧರಾದ ಕುಂಡಕುಂದಾಚಾರ್ಯರು ಇವರುಗಳು ತಮ್ಮ ಮಹಿಮೆಯನ್ನು ನನಗೆ ಅನುಗ್ರಹಿಸಲಿ.

೪. ತಮ್ಮ ಪವಿತ್ರವಾದ ಗುಣಗಳಿಂದ ಮುನಿಗಳೋ ಗಣಧರರೋ ಎಂದು ತಿಳಿಯಲಶಕ್ಯರಾದ ಪರಿಶುದ್ಧರಾದ ಸಮಂತಭದ್ರ ಪೂಜ್ಯಪಾದಮುನೀಶ್ವರರ ಚರಿತ್ರೆಗಳು ನಮಗೆ ತೃಪ್ತಿಯನ್ನುಂಟುಮಾಡಲಿ.

೫. ಈ ಭೂಮಿಯಲ್ಲಿ ಇದಕ್ಕೆ ಮೊದಲೇ ಪ್ರಾಕೃತದಲ್ಲಿಯೂ, ಸಂಸ್ಕೃತದಲ್ಲಿಯೂ, ಕನ್ನಡದಲ್ಲಿಯೂ ಆರಾರು ಈ ಯಶೋಧರಕಾವ್ಯವನ್ನು ಬರೆದಿರುವರೋ ಅವರೆಲ್ಲರ ಸದ್ಬುದ್ಧಿಯು ಸರಸವಾದ ಪದಪ್ರಯೋಗಮಾಡುವ ದಾರಿಯಲ್ಲಿ ನಮಗೆ ಒತ್ತಾಸೆಮಾಡಲಿ.

೬. ಕಾವ್ಯಾರಂಭದಲ್ಲಿ ಮಾಡುವ ಮಂಗಳಾಚರಣೆ (ದೇವರಪ್ರಾರ್ಥನೆ) ಯಾದ ಬಳಿಕ ಕವಿಗಳೆಂಬ ದೇವತೆಗಳಿಗೆ ಇಂದ್ರಸಮನಾದ ಮತ್ತು ಕವಿಗಳೆಂಬ ಕಲ್ಪಲತೆಗೆ ಮಂದಾರವೃಕ್ಷಸಮನಾದ ನನಗೆ ನನ್ನೊಡೆಯನಾದ ಬಲ್ಲಾಳರಾಜನ ವಂಶವರ್ಣನೆಯೇ ಮಾಡಬೇಕಾದ ಕೆಲಸವಾಗಿದೆ.

ಭಾವಕನತಿರಸಿಕಂ ಸಂ|
ಭಾವಿತನಭ್ಯಸ್ತಶಾಸ್ತ್ರನನ್ವಿತನೆನಿಪಾ||
ದೇವಂಗೆ ವಿಷಯಮಲ್ಲದೆ|
ದೇವಾನಾಂ ಪ್ರಿಯರ್ಗೆ ವಿಷಯಮೇ ಸತ್ಕಾವ್ಯಂ|| ೭

ಕೇಳಲೊಡಂ ಶಬ್ದಾರ್ಥಗು|
ಣಾಲಂಕೃತಿರೀತಿಭಾವರಸವೃತ್ತಿಗಳಂ||
ಮೇಳವಿಸಲ್ಬಲ್ಲಂ ಬ|
ಲ್ಲಾಳಂ ಸಾಹಿತ್ಯಕಮಳಮತ್ತಮರಾಳಂ|| ೮

ಸಳನೆಂಬ ಯಾದವಂ ಹೊ|
ಯ್ಸಳನಾದಂ ಶಶಕಪುರದ ವಾಸಂತಿಕೆಯೊಳ್||
ಮುಳಿದು ಪುಲಿ ಪಾಯೆಯುಂ "ಹೊ|
ಯ್ಸಳ" ಯೆಂದೊಡೆ ಗುರುಗಳಿತ್ತು ಕುಂಚದ ಸೆಳೆಯಂ|| ೯

ವಿನಯಾದಿತ್ಯನೆ ಹೊಯ್ಸಳ|
ಜನಪತಿಗಳ ಕೀರ್ತಿಪುಂಡರೀಕಿಣಿಗುನ್ಮೀ||
ಲನಮನೊಡರ್ಚಿದನೆಱೆಯಂ|
ಗ ನೃಪಾಲನ ತಂದೆ ಬಿಟ್ಟಿದೇವಂಗಜ್ಜಂ|| ೧೦

---

೭. ಸಹೃದಯನೂ, ಅತಿರಸಿಕನೂ, ಮಾನ್ಯನೂ, ಸಮಸ್ತಶಾಸ್ತ್ರಾಭ್ಯಾಸ ಮಾಡಿದವನೂ, ಸದ್ವಂಶಜಾತನೂ ಆದ ನಮ್ಮ ಬಲ್ಲಾಳರಾಜನಿಗಲ್ಲದೆ ಮೂರ್ಖ (ದೇವಾನಾಂಪ್ರಿಯ) ರಾದವರಿಗೆ ಸತ್ಕಾವ್ಯವು ಮನೋರಂಜಕ ವಾಗುತ್ತದೆಯೇ ?

೮. ಸಾಹಿತ್ಯವೆಂಬ ಕಮಲಕ್ಕೆ ಹಂಸಸ್ವರೂಪನಾದ ಬಲ್ಲಾಳರಾಜನೇ ಕೇಳಿದೊಡನೆಯೇ ಕಾವ್ಯಾಂಗಗಳಾದ ಶಬ್ದ, ಗುಣ, ಅಲಂಕಾರ, ರೀತಿ, ಭಾವ, ರಸ, ವೃತ್ತಿಗಳನ್ನು ಹೊಂದಿಸಿ ತಿಳಿಯಲು ಶಕ್ತಿಯುಳ್ಳವನು.

೯. ಶಶಕಪುರವೆಂಬೂರಿನ ವಾಸಂತಿಕಾದೇವಿಯ ಗುಡಿಯ ಬಳಿ ಹುಲಿ ಯೊಂದು ಸಳನೆಂದು ಹೆಸರುಳ್ಳ ಯಾದವರಾಜನ (ಬಲ್ಲಾಳನ) ಮೇಲೆ ಕೋಪದಿಂದ ಬೀಳಲು ಅದನ್ನು ಪರಿಹರಿಸಲು ಗುರುಗಳು ತಮ್ಮ ಚಾಮರ ದೆಳೆಯೊಂದನ್ನುಕೊಟ್ಟು "ಹೊಯ್ ಸಳ"(ಸಳನೇಹೊಡಿ)ಎಂದು ಹೇಳಿದರು. ಅಂದಿನಿಂದ ಸಳನೆಂಬ ಹೆಸರುಳ್ಳ ಯಾದವರಾಜನ ವಂಶಕ್ಕೆ ಹೊಯ್ಸಳ ಎಂದು ಹೆಸರಾಯಿತು. ಆವಂಶದ ಬಲ್ಲಾಳರಾಜನು ಹೊಯ್ಸಳಬಲ್ಲಾಳ ನೆಂದು ಪ್ರಸಿದ್ಧನಾದನು.

೧೦. ಬಿಟ್ಟಿದೇವರಾಜನಿಗೆ ತಾತನೂ, ಎಱೆಯಂಗರಾಜನಿಗೆ ತಂದೆಯೂ

ಅರಸಾದಂ ಸಂವರಣೆಗೆ।
ಪರರಾಷ್ಟ್ರಂ ಗಂಗವಾಡಿ ತೊಂಭತ್ತಱುಸಾ॥
ಸಿರಮುಂ ಬ್ರಾಹ್ಮಣದತ್ತಿಗೆ।
ವರೆ ಸಪ್ತಮಚಕ್ರವರ್ತಿ ವಿಷ್ಣುನೃಪಾಲಂ॥ ೧೧

ಈವಿರಿವಕಾವಗುಣದಿಂ।
ದಾ ವಿಷ್ಣುವಿನೊರೆಗೆ ದೊರೆಗೆವರಲುೞಿದ ಧರಿ॥
ತ್ರೀವಲ್ಲಭರೇಮೇಚಲ।
ದೇವಿಗಮೆಱೆಯಂಗನೃಪತಿಗಂ ಪುಟ್ಟಿದರೇ॥ ೧೨

ಧೀರನಿಧಿ ಬಿಟ್ಟಿದೇವನೊ।
ಳೋರಗೆ ಬಲ್ಲಾಳನಿಂತು ನರಸಿಂಹಸುತಂ॥
ಗಾರೆಣೆ ಗಗನಂ ಗಗನಾ।
ಕಾರಮೆನಲ್ತುವ್ಮೊಳೆಣೆ ಪಿತಾಮುಹಪೌತ್ರರ್॥ ೧೩

---

ಆದ ವಿನಯಾದಿತ್ಯನೇ ಹೊಯ್ಸಳರಾಜರುಗಳ ಕೀರ್ತಿಯೆಂಬ ಕಮಲವನ್ನು ಅರಳಿಸಿದವನು. (ಇವನೇ ಕೀರ್ತಿಯನ್ನು ಅತಿಯಾಗಿ ಹೆಚ್ಚಿಸಿದವನೆಂದು ಭಾವವು).

೧೧. ಶತ್ರುರಾಜರಿಂದ ಸಂಪಾದಿಸಿದ ಸಂಪತ್ತನ್ನು ತನ್ನ ರಾಜ್ಯದ ಸಮ ಕಟ್ಟಿಗೂ, ಗಂಗವಾಡಿಯೆಂಬಲ್ಲಿರುವ ತೊಂಬತ್ತಾರುಸಾವಿರ ವರಹಗಳ ಉತ್ಪತ್ತಿಯುಳ್ಳ ಭೂಮಿಯನ್ನು ಬ್ರಾಹ್ಮಣದತ್ತಿಗೂ ವಿನಿಯೋಗಿಸಿದ್ದರಿಂದ ವಿಷ್ಣುನೃಪಾಲನು (ಬಿಟ್ಟಿದೇವ) ಹೊಯ್ಸಳರಾಜರಲ್ಲಿ ಏಳನೆಯ ಚಕ್ರವರ್ತಿ ಯೆನಿಸಿಕೊಂಡಿದ್ದನು. (ವಿಷ್ಣುನೃಪಾಲನು ಅತುಳಸಂಪತ್ತಿನಿಂದ ಕೂಡಿ ಅತ್ಯಂತ ದಾನಶೀಲನಾಗಿದ್ದನೆಂದು ಭಾವವು).

೧೨. ದಾನಮಾಡುವ, ಯುದ್ಧಮಾಡುವ, ಸಂರಕ್ಷಿಸುವ ಗುಣಗಳಿಂದ ಕೂಡಿದ ಆ ವಿಷ್ಣುವರ್ಧನರಾಜನಿಗೆ ಸಮಾನರಾಗಲು ಉಳಿದ ರಾಜ ರಾರಾದರೂ ಎಱೆಯಂಗರಾಜನಿಗೂ ಏಚಲದೇವಿಗೂ ಉದ್ಭವಿಸಿರುವರೇ? (ಅಂತಹ ತಂದೆತಾಯಿಗಳಿಗೆ ಹುಟ್ಟಿದ್ದರೆ ಮಾತ್ರ ಅವನಿಗೆ ಸಮಾನರಾಗು ತ್ತಿದ್ದರು. ಅದಿಲ್ಲದಿರುವುದರಿಂದ ಅವನಿಗೆ ಸಮಾನರಾರೂ ಇಲ್ಲವೆಂದು ಭಾವವು).

೧೩. ಧೈರ್ಯಶಾಲಿಯಾದ ವಿಷ್ಣುವರ್ಧನನಿಗೆ (ಬಿಟ್ಟಿದೇವ) ಸಮಾನನಾದ ವನು ವಿನಯಾದಿತ್ಯನು. ವಿನಯಾದಿತ್ಯನಿಗೆ ಸಮನಾದವನಾರು? "ಗಗನಂ

ಆಟಾಳಿಗೆ ಬಲ್ಲಾಳನ|
ದಾಟಿಯ ಧಾವಣಿಯ ತುರಗದಟಖುರಹತಿಯಿಂ||
ಪೇಟಿ ಪೆಸರಿಲ್ಲದಂತಿರೆ|
ಪಾಟಾದುವು ವೈರಿದುರ್ಗಮೆನಿತೊಳವನಿತುಂ|| ೧೪

ಆರೆಣೆಯೆಂಬೆನಳುಂಬದ|
ಬೀರಮನೀ ಜಗಮನಾವಗಂ ಸುತ್ತಿದ ಮು||
ನ್ನೀರೆಂಬುದು ಬಿರುದಿನ ಬೆ|
ಳ್ವಾರೆನಿಸಿದುದದಟರಾಯಕೋಳಾಹಳನಾ|| ೧೫

ಚಲದ ಬಲದೆಸಕದಿಂ ಸಲೆ|
ನಿಲೆ ನಾಲ್ಕುಂ ದೆಸೆಯ ಮೂಱುವರೆರಾಯರ ಮುಂ||
ದಲೆಯೊಳಗುಂದಲೆಯೆನೆ ನಿಂ|
ದಲೆವುದು ತೇಜಂ ಪ್ರತಾಪಚಕ್ರೇಶ್ವರನಾ|| ೧೬

---

ಗಗನಾಕಾರಂ" ಎಂಬ ನುಡಿಗೆ ತಕ್ಕಂತೆ ವಿನಯಾದಿತ್ಯನಿಗೆ ಸಮಾನನು ವಿಷ್ಣುವರ್ಧನನೇ. ಹೀಗೆ ತಾತನೂ ಮೊಮ್ಮಗನೂ ತಮತಮಗೆ ಸಮಾನರು. (ಗಗನಕ್ಕೆ ಹೋಲಿಸಲು ಬೇರೊಂದು ವಸ್ತುವಿಲ್ಲದುದರಿಂದ "ಗಗನಂ ಗಗನಾಕಾರಂ" ಎಂದು ಹೋಲಿಸುತ್ತಾರೆ. ಹಾಗೆ ಈ ವಿನಯಾದಿತ್ಯ ವಿಷ್ಣುವರ್ಧನರಿಗೆ ಸಮಾನರು ಬೇರೆ ಯಾರೂ ಇರಲಿಲ್ಲವೆಂದು ಭಾವವು).

೧೪. ಛಲಗಾರನಾದ ಬಲ್ಲಾಳರಾಜನ ಮುತ್ತಿಗೆಯ ಸೈನ್ಯದ ತುರಗಪಂಕ್ತಿಯ ಕುದುರೆಗಳ ಗೊರಸಿನ ಪೆಟ್ಟಿನಿಂದ ಶತ್ರುರಾಜರ ದುರ್ಗಗಳೆಲ್ಲವೂ ಹೆಸರು ಹೇಳುವುದಕ್ಕೂ ಒಂದಿಲ್ಲದಂತೆ ಹಾಳಾದುವು. (ನಿರ್ನಾಮವಾದುವೆಂದು ಭಾವವು).

೧೫. ಈ ಭೂಮಿಯನ್ನು ಸಮುದ್ರದಂತೆ ಎಲ್ಲಾಕಡೆಗಳಲ್ಲಿಯೂ ಸುತ್ತಿದ ಬಲ್ಲಾಳರಾಜನ ಕೀರ್ತಿಯು ಆ "ಅದಟರಾಯಕೋಲಾಹಳ" ನೆಂಬ ಬಿರುದುಳ್ಳ (ವಿಮರ್ಧಿತಶತ್ರುವಾದ) ರಾಜನಿಗೆ ಬಿರುದಿನ ರಕ್ಷಣೆಯ ಬೇಲಿಯಂತಿದ್ದಿತು. ಇವನಿಗೆ ಸಮರಾರು ?

೧೬. ಆ ಪ್ರತಾಪಚಕ್ರೇಶ್ವರನಾದ ಬಲ್ಲಾಳರಾಜನು ಹಟದಿಂದಲೂ ಪರಾಕ್ರಮದಿಂದಲೂ ಸಂಪಾದಿಸಿದ ಕೀರ್ತಿಯು ನಾಲ್ಕುದಿಕ್ಕಿನ ಸಾಮಾನ್ಯ ರಾಜರ ತಲೆಗಳ ಮೇಲೆ ಅಧಿಕವಾದ ತೇಜಸ್ಸಿನಂತೆ ಪ್ರಕಾಶಿಸುತ್ತಿದ್ದಿತು.

ನೆಗಳ್ದ ನೃಪರೊಳಗೆ ಮುಂ ಕವಿ।
ತೆಗೆ ಮುಂಜಂ ಭೋಜನುತ್ಪಲಂ ಶ್ರೀಹರ್ಷಂ॥
ಮಿಗಿಲವರಿಂ ಬಲ್ಲಾಳಂ।
ದ್ವಿಗುಣಂ ತ್ರಿಗುಣಂ ಚತುರ್ಗುಣಂ ಪಂಚಗುಣಂ॥ ೧೭

ಆ ನೃಪನ ಸಭೆಯೊಳಖಿಳಕ।
ಳಾನಿಪುಣರ ನಟ್ಟನಡುವೆ ಬೆಟ್ಟಿತ್ತಿ ಗೆಲಲ್॥
ತಾನೆ ಚತುರ್ವಿಧಪಂಡಿತ।
ನೇನೆಂಬದೊ ಸುಕವಿಭಾಳಲೋಚನನಳವಂ॥ ೧೮

ನವಪ್ಪೈಯ್ಯಾಕರಣಂ ತ।
ರ್ಕವಿನೋದಂ ಭರತಸುರತಶಾಸ್ತ್ರವಿಳಾಸಂ॥
ಕವಿರಾಜಶೇಖರಂ ಯಾ।
ದವರಾಜಚ್ಛತ್ರನಖಿಳಬುಧಜನಮಿತ್ರಂ॥ ೧೯

---

೧೭. ಪ್ರಸಿದ್ಧರಾದ ಪೂರ್ವರಾಜರುಗಳಲ್ಲಿ ಸಂಸ್ಕೃತಕವಿತೆಗೆ ಹೆಸರಾದವರು ಮುಂಜ, ಭೋಜ, ಉತ್ಪಲ, ಶ್ರೀಹರ್ಷ ಇವರುಗಳು. ಈ ಬಲ್ಲಾಳರಾಜನಾದರೋ ಅವರೆಲ್ಲರಿಗಿಂತ ಎರಡರಷ್ಟು, ಮೂರರಷ್ಟು, ನಾಲ್ಕರಷ್ಟು, ಐದರಷ್ಟು ಮಿಗಿಲಾದವನು. (ಅವರೆಲ್ಲರಿಗಿಂತಲೂ ಇವನು ಹೆಚ್ಚು)

೧೮. ಅಂತಹ ಕವಿಪುಂಗವನಾದ ಬಲ್ಲಾಳರಾಜನ ಸಭೆಯಲ್ಲಿದ್ದ ಎಲ್ಲಾ ಕಲಾನಿಪುಣರ (ಪಂಡಿತರ) ಮಧ್ಯದಲ್ಲಿ ಎದ್ದುನಿಂತು ಅವರೆಲ್ಲರನ್ನೂ ಜಯಿಸುವವನು ಚತುರ್ವಿಧಪಂಡಿತನಾದ ಇವನೊಬ್ಬನೇ ಎಂದಮೇಲೆ ಕವಿಭಾಳಲೋಚನನೆಂದು ಹೆಸರಾಂತ ಇವನ ಸಾಮರ್ಥ್ಯವನ್ನು ಏನೆಂದುವರ್ಣಿಸುವುದೋ?

೧೯–೨೦. ಒಂಭತ್ತು ವಿಧವಾದ ವ್ಯಾಕರಣಶಾಸ್ತ್ರಪಂಡಿತನೂ, ಭರತಶಾಸ್ತ್ರಸುರತಶಾಸ್ತ್ರಗಳಲ್ಲಿ ನಿಪುಣನೂ, ಕವಿಗಳೆಲ್ಲೆಲ್ಲ ಮಹಾಶ್ರೇಷ್ಠನೂ, ಯಾದವರಾಜರಿಂದ ಸಂರಕ್ಷಿತನಾದವನೂ, ವಿದ್ವಾಂಸರಿಗೆ ಪ್ರಿಯಸ್ನೇಹಿತನೂ, ಚಾತುರ್ಯನಿಧಿಯೂ, ಹಟದಸ್ಥಾನನೂ, ತ್ಯಾಗಸಮುದ್ರನೂ, ಪರಾಕ್ರಮದಗಣಿಯೂ, ಸಂಪತ್ಸಮೃದ್ಧನೂ, ಆಯಕ್ಕೆ ಆಯಸ್ಸಾ (ಒಳ್ಳೆಯದು) ದವನೂ (ಆಯವುಳ್ಳವನೂ) ಆಗಿರುವವನಾರೆಂದರೆ ಜನ್ನನೇ. ಇವನು ಕಮ್ಮೆಕುಲಕ್ಕೆ ರತ್ನಪ್ರಾಯನಾಗಿರುವನು.

ಚದುರನಿಧಿ ಚಲದನೆಲೆ ಚಾ।
ಗದ ಸಾಗರಮಣ್ಮೆನಾಗರಂ ಪೆಂಪಿನ ಸಂ॥
ಪದಮಾಯದಾಯುವಾರೆಂ।
ಬುದೊ ಜನ್ನಂ ಕಮ್ಮೆಗುಲದ ತೊಡವಿನ ರನ್ನಂ॥ ೨೦

ಕನ್ನರನಾದರದಿಂ ಕುಡೆ।
ಹೊನ್ನಂ ಮನವೊಸೆದು ತೈಲಪಂ ಕುಡೆ ರನ್ನಂ॥
ಮನ್ನಿಸಿ ಬಲ್ಲಾಳಂ ಕುಡೆ।
ಜನ್ನಂ ಕವಿಚಕ್ರವರ್ತಿವೆಸರಂ ಪಡೆದಂ॥ ೨೧

ಶ್ರೀಮತ್ಕಾಣೂರ್ಗಣಚಿಂ।
ತಾಮಣಿಗಳ್ ರಾಮಚಂದ್ರ ಗಂಡವಿಮುಕ್ತರ್॥
ತಾಮೆ ಗಡ ಗುರುಗಳೆನಿಪ ಮ।
ಹಾಮಹಿಮೆಗೆ ನೋಂತ ಭವ್ಯಚೂಡಾರತ್ನಂ॥ ೨೨

ವಾಣೀ ಪಾರ್ವತಿ ಮಾಡಿದ।
ಜಾಣೆಂತುಟೊ ಭಾಳಲೋಚನಂ ಕವಿಸುಮನೋ॥
ಬಾಣನ ಮಗನೆಂದಖಿಳ।
ಕ್ಷೋಣಿಗೆ ಪೆಸರಾಯ್ತು ಕೂರ್ಮೆಗಿದು ಕೌತುಕಮೇ॥ ೨೩

---

೨೧. ಕನ್ನರನೃಪನು ಆದರಿಸಿ ಕೊಟ್ಟುದರಿಂದ ಹೊನ್ನಕವಿಯೂ, ತೈಲಪ ರಾಜನು ಸಂತೋಷದಿಂದ ಕೊಡಲು ರನ್ನಕವಿಯೂ ಬಲ್ಲಾಳರಾಜನು ಮನ್ನಿಸಿ ಕೊಡಲಾಗಿ ಜನ್ನಕವಿಯೂ ಕವಿಚಕ್ರವರ್ತಿಗಳೆಂದು ಹೆಸರಾದರು.

೨೨. ಕಾಣೂರ್ಗಣಕ್ಕೆ ಚಿಂತಾಮಣಿಯಂತಿರುವ (ಮುಖ್ಯರಾದ) ರಾಮ ಚಂದ್ರಮಹಾವ್ರತಿಗಳು ತನಗೆ ಗುರುಗಳಾಗುವಂತಹ ಮಹಾಪುಣ್ಯಶಾಲಿ ಯಾದವನೂ, ಭವ್ಯಜನಗಳಿಗೆ ರತ್ನಸ್ವರೂಪನೂ ಆಗಿರುವವನು ಜನ್ನ ಕವಿಯೇ.

೨೩. ಕವಿಭಾಳಲೋಚನ (ಕವಿಗಳಲ್ಲಿ ಶಿವನಂತೆ ಶ್ರೇಷ್ಠನಾದವನು) ನೆಂದು ಹೆಸರಾಂತ ಜನ್ನನು ತಾನುಹೊಂದಿರುವ ಸರಸ್ವತಿಯನ್ನು (ವಿದ್ಯಾಪಾಂಡಿತ್ಯ ವನ್ನು) ಪಾರ್ವತಿಯನ್ನಾಗಿ (ಹೆಂಡತಿಯನ್ನಾಗಿ) ಮಾಡಿಕೊಂಡನು. ಇವ ನೆಂತಹ ಚದುರನೋ? ಅಲ್ಲದೆ ಇವನು ಕವಿಸುಮನೋಬಾಣನ ಮಗನೆಂದೂ (ಕವಿಗಳಲ್ಲಿ ಮನ್ಮಥನಂತಿರುವವನು) ಹೆಸರುಪಡೆದನು. (ಭಾಳಲೋಚನ– ಶಿವನಿಗೂ, ಸುಮನೋಬಾಣ–ಮನ್ಮಥನಿಗೂ ದ್ವೇಷ. ಇದು ಆಶ್ಚರ್ಯ ವಲ್ಲವೇ? ಎಂದರೆ ಅಲ್ಲ. ಹೇಗೆಂದರೆ) ಪ್ರೀತಿಯಿರುವೆಡೆಯಲ್ಲಿ ಆಶ್ಚರ್ಯ ವೇನಿದೆ?

ಶ್ರಾವಕಜನದುಪವಾಸಂ।
ಜೀವದಯಾಷ್ಟಮಿಯೊಳಾಗೆ ಪಾರಣೆ ಕಿವಿಗ॥
ಳ್ಗೀವಸ್ತುಕಥನದಿಂದು।
ದ್ಭಾವಿಸೆ ಕವಿಭಾಳಲೋಚನಂ ವಿರಚಿಸಿದಂ॥ ೨೪

ಇತಿಹಾಸಮೆಂಬ ವಿಮಳಾ।
ಮೃತವಾರ್ಧಿಯೊಳೊಗೆದ ಕಲ್ಪಕುಜದಂತೆ ರಸಾ॥
ನ್ವಿತಮಾದೀಕೃತಿ ಬುಧಸಂ।
ತತಿಗಕ್ಷಯಸುಖಮನೀವುದೊಂದಚ್ಚರಿಯೇ॥ ೨೫

ಪರೆವುದು ದುರಿತತಮಿಸ್ರಂ।
ಪೊರೆಯೇಱುವುದಮಳದೃಷ್ಟಿ ಕುವಳಯಬನಮಾ॥
ಚರಿಪಜನಕ್ಕೆ ಯಶೋಧರ।
ಚರಿತಕಥಾಶ್ರವಣಮೆಂಬ ಚಂದ್ರೋದಯದೋಳ್॥ ೨೬

ಶೀರ್ಷಾಭರಣಂ ಧರೆಗು।
ತ್ಕರ್ಷವಿಳಾಸನದ ಭೂಮಿ ಸಕಳಜನಕ್ಕಂ॥
ಹರ್ಷಮನೀವುದು ಭಾರತ।
ವರ್ಷದ ಯೌಧೇಯ ವಿಷಯದೊಳ್ ರಾಜಪುರಂ॥ ೨೭

---

೨೪. ಜೀವದಯಾಷ್ಟಮಿಯೆನಿಸಿಕೊಳ್ಳುವ ಆಶ್ವಯುಜ ಶುದ್ಧ ಅಷ್ಟಮಿಯಲ್ಲಿ ಶ್ರಾವಕರು (ಜೈನ ಗೃಹಸ್ಥರು) ಉಪವಾಸಮಾಡುವರು. ಮರು ದಿವಸ ಪಾರಣೆ (ಆಹಾರ) ಮಾಡುವರು. ಅಂತಹವರ ಕಿವಿಗಳಿಗೆ ಪಾರಣೆಯನ್ನು (ಕಿವಿಗೆ ತೃಪ್ತಿಯನ್ನು) ಈ ಕಥಾರಚನೆಯಿಂದುಂಟುಮಾಡಲೆಂದು ಕವಿಭಾಳಲೋಚನನು ಈ ಕಾವ್ಯವನ್ನು ವಿರಚಿಸಿದನು.

೨೫. ಇತಿಹಾಸವೆಂಬ ಕ್ಷೀರಸಮುದ್ರದಲ್ಲಿ ಹುಟ್ಟಿದ ಕಲ್ಪವೃಕ್ಷದಂತೆ ರಸವನ್ನು ಹೊಂದಿರುವ ಈ ಕಾವ್ಯವು ವಿದ್ವಾಂಸರಿಗೆ ಶಾಶ್ವತವಾದ ಸುಖ (ಮೋಕ್ಷ) ವನ್ನುಂಟುಮಾಡುವುದೆಂಬುದರಲ್ಲಿ ಆಶ್ಚರ್ಯವೇನಿದೆ?

೨೬. ಈ ಯಶೋಧರ ಚರಿತ್ರೆಯನ್ನು ಕೇಳುವುದೆಂಬ ಚಂದ್ರೋದಯದಲ್ಲಿ ಪಾಪವೆಂಬ ಕತ್ತಲೆಯು ನಾಶವಾಗುವುದು. ನಿರ್ಮಲವಾದ ದೃಷ್ಟಿ (ನೋಟ ಮತ್ತು ಜ್ಞಾನ) ಉಂಟಾಗುವುದು. ಈ ಕಥೆಯಲ್ಲಿ ಹೇಳಿರುವಂತೆ ನಡೆಯುವ ಜನರು ನೈದಿಲೆಗಳು ಚಂದ್ರೋದಯದಲ್ಲಿ ಅರಳಿ ಆನಂದಿಸುವಂತೆ ಆನಂದವನ್ನು ಅನುಭವಿಸುವರು.

೨೭. ಭಾರತವರ್ಷದ (ಭರತಖಂಡದ) ಯೌಧೇಯ ದೇಶದಲ್ಲಿ ಭೂಮಿಗೆ

ಮೇರು ನೃಪಪ್ರಾಸಾದಂ |
ವಾರಿಧಿ ನಿಜಪರಿಖೆ ವಜ್ರವೇದಿಕೆ ತತ್ಪ್ರಾ ||
ಕಾರಂ ಜಂಬೂದ್ವೀಪಾ |
ಕಾರಮನಿಂಬಿಟ್ಟರೆಂಬಿನಂ ಪುರಮೆಸೆಗುಂ || ೨೮

ಅದಱೊಳಗೆ ಮೆಱೆವ ಮಣಿಮಾ |
ಡದ ಲೋವೆಗಳಲ್ಲಿ ಕೋದ ಪೊಸಮುತ್ತಿನ ಮೊ ||
ತ್ತದಬೆಳಗು ಚಂದನಾಲೇ |
ಪದ ಪದನಂ ಕುಡುವುದಲೆವ ರವಿಗೆಡೆವಗಲೊಳ್ || ೨೯

ಕಾರಿರುಳೊಳಮೆಳವಿಸಿಲಂ |
ಪೂರಂಬರಿಯಿಪುವು ಬೀದಿಯೊಳ್ನಿಜರುಚಿಯಿಂ ||
ಹೀರೆಯ ಹೂವಿನ ಬಣ್ಣದ |
ನೇರಾಣೆಯ ಕುಸುರಿವೆಸದ ನೆಲೆಮಾಡಂಗಳ್ || ೩೦

---

ಚೂಡಾರತ್ನದಂತೆಯೂ, ಸೌಂದರ್ಯಕ್ಕೆ ಜನ್ಮಭೂಮಿಯಂತೆಯೂ ಇರುವ ರಾಜಪುರವೆಂಬ ಪಟ್ಟಣವು ಸಕಲಜನಗಳಿಗೂ ಹರ್ಷದಾಯಕವಾಗಿರುವುದು.

೨೮. ಆ ನಗರದ ರಾಜನ ಅರಮನೆಯೆ ಮೇರುಪರ್ವತದಂತೆಯೂ, ಆ ನಗರದ ಸುತ್ತಲೂ ಇರುವ ಪರಿಖೆ(ಕಂದಕ) ಯೇ ಸಮುದ್ರದಂತೆಯೂ, ನಗರದ ಪ್ರಾಕಾರವೇ ಸಮುದ್ರದಡದಂತೆಯೂ ಇದ್ದುದರಿಂದ ಆ ನಗರವು ಜಂಬೂದ್ವೀಪದ ಸುಂದರವಾದ ಆಕಾರವನ್ನು ತಂದಿಟ್ಟಂತೆ ಮನೋಹರವಾಗಿರುವುದು.

೨೯. ಆ ನಗರದ ರತ್ನಖಚಿತವಾದ ಉಪ್ಪರಿಗೆಗಳ ಲೋವೆ (ಮನೆಯ ಮುಂದೆ ಚಾಚಿಕೊಂಡಿರುವ ಭಾಗ — ಸೂರು) ಗಳಲ್ಲಿ ಪೋಣಿಸಿದ್ದ ಹೊಸ ಮುತ್ತಿನ ಸಮೂಹದ ಬೆಳಕು ಮಧ್ಯಾಹ್ನದ ಸೂರ್ಯಬಿಂಬಕ್ಕೆ ಚಂದನಾನುಲೇಪನ ಮಾಡಿದಂತಹ ಸ್ಥಿತಿಯನ್ನುಂಟುಮಾಡುವುದು (ಮುತ್ತುಗಳ ಬಿಳುಪಾದ ಪ್ರಭೆಯು ಸೂರ್ಯಮಂಡಲದವರೆಗೂ ವ್ಯಾಪಿಸಿ ಬೆಳಕನ್ನುಂಟುಮಾಡುತ್ತಿದ್ದಿತೆಂದು ಭಾವವು).

೩೦. ಆ ನಗರದ ಉಪ್ಪರಿಗೆಗಳಲ್ಲಿ ಹೀರೇಹೂವಿನ ಬಣ್ಣದ ಗೆಜ್ಜೆಗಳಂತೆ ನೇತಾಡುವ ಹಳದಿಯ ಬಣ್ಣದ ಮುತ್ತುಗಳ ಕಾಂತಿಯು ಕಾರ್ಗಾಲ(ಮಳೆಗಾಲ) ದ ರಾತ್ರಿಯ ಕತ್ತಲೆಯಲ್ಲಿಯೂ ಎಳೆಬಿಸಿಲಿರುವುದೋ ಎಂಬಂತೆ ಬೀದಿಗಳಲ್ಲೆಲ್ಲಾ ಪ್ರಸರಿಸಿರುತ್ತಿರುವುದು.

ನೆಲೆಮಾಡದೊಳೆಡೆಯಾಡುವ ।
ಕಲಹಂಸಾಲಸವಿಳಾಸವತಿಯರ ಮುಖಮಂ ॥
ಡಲಕೆ ಸರಿಯಾಗಲಾಱದೆ ।
ಸಲೆ ಮಾಳ್ಪಂ ಚಂದ್ರನಿಂತು ಚಾಂದ್ರಾಯಣಮಂ ॥ ೧ ೩೧

ಪಗಲನಿರುಳ್ ನಿಜರುಚಿಯಿಂ ।
ಮಿಗಿಸುವ ಜಿನಭವನದರುಣಮಣಿಕಲಶಂಗಳ್ ॥
ನಗುವುವು ಕೇತುಗಳಿಂ ಕೇ ।
ತುಗಳಂ ಕೆಳಗೊಂಡು ನಿಂದ ರವಿಮಂಡಲಮಂ ॥ ೩೨

೩೧. ಆ ನಗರದ ಉಪ್ಪರಿಗೆಗಳಲ್ಲಿ ಓಡಾಡುವ ಕಲಹಂಸದಂತೆ ಮಂದಗಮನವುಳ್ಳ ಸುಂದರಿಯರ ಮುಖಮಂಡಲಕ್ಕೆ ತಾನು ಸಮಾನನಾಗಲಾರದೆ ಚಂದ್ರನು ೧ ಚಾಂದ್ರಾಯಣವನ್ನು ಮಾಡುತ್ತಿರುವನೋ ಎಂಬಂತೆ ತೋರುತ್ತಿರುವುದು. (ಅಂದರೆ ಆ ವಿಲಾಸವತಿಯರ ಮುಖದ ಕಾಂತಿಯು ಚಂದ್ರಮಂಡಲದ ಕಾಂತಿಗಿಂತಲೂ ಮಿಗಿಲಾಗಿತ್ತೆಂದು ಭಾವವು).

೩೨. ರಾತ್ರಿಯಲ್ಲಿಯೂ ಹಗಲನ್ನು ಮಾರಿಸುವ ಕಾಂತಿಯುಳ್ಳ ಆ ನಗರದ ಜಿನಭವನಗಳ ಮೇಲಿರುವ ಕೆಂಪುರತ್ನದ ಕಳಶಗಳು ತಮ್ಮ ಮೇಲೆ ಹಾರಾಡುತ್ತಿರುವಕೇತು(ಧ್ವಜ)ಗಳಿಂದ ಕೇತುಗ್ರಹಗಳಿಂದ ಕೂಡಿರುವ ರವಿಮಂಡಲವನ್ನು ಹಾಸ್ಯಮಾಡುವಂತಿರುವುದು. (ಕೇತು ಶಬ್ದಕ್ಕೆ ಕೇತು ಗ್ರಹವೆಂಬ ಹೆಸರಿದ್ದರೂ "ಕೇತುಗಳಂತೆಕೆಳಗೊಂಡುನಿಂದ" ಎಂದು ಹೇಳಿರುವುದರಿಂದ ಉಪಲಕ್ಷಣೆಯಿಂದ ಇಲ್ಲಿ ಗ್ರಹಗಳೆಂದು ಹೇಳಬೇಕಾಗುತ್ತದೆ.)

ಟಿಪ್ಪಣಿ—೧. ಚಾಂದ್ರಾಯಣವೆಂದೊಂದು ವ್ರತವುಂಟು. ಆ ವ್ರತಮಾಡುವವರು ಕೃಷ್ಣಪಕ್ಷದ ಪಾಡ್ಯವೊದಲ್ಗೊಂಡು ಅಮಾವಾದಸಿಯವರೆಗೆ ದಿನವೂ ಒಂದೊಂದು ಕಬಳ ಆಹಾರವನ್ನು ಕಡಮೆಮಾಡುತ್ತ ಹೋಗಿ ಅಮಾವಾದಸಿಯಂದು ಉಪವಾಸವಿದ್ದು ಮರುದಿನದಿಂದ ಅಂದರೆ ಶುಕ್ಲಪಕ್ಷದ ಪಾಡ್ಯಮಿಯಿಂದ ಹದಿನೈದು ದಿನಗಳು ದಿನಕ್ಕೊಂದೊಂದು ಕಬಳ ಆಹಾರವನ್ನು ಹೆಚ್ಚಿಸುತ್ತಾ ಪೌರ್ಣಮಿಯಂದು ಸಂಪೂರ್ಣವಾಗಿ ಆಹಾರವನ್ನು ತೆಗೆದುಕೊಳ್ಳುವರು. ಆಹಾರ ಕಡಮೆಯಾಗುತ್ತ ಹೋಗುವಾಗ ಉಂಟಾಗುವ ಹಸಿವಿನ ಬಾಧೆಯನ್ನು ಸಹಿಸುವಶಕ್ತಿಯನ್ನು ಹೊಂದಲು ಈ ವ್ರತವು ಹುಟ್ಟಿರಬೇಕು. ಚಂದ್ರನ ಕಳೆಯೂ ಕೃಷ್ಣಪಕ್ಷದ ಪಾಡ್ಯದಿಂದ ಒಂದೊಂದು ಕಳೆ ಕಡಮೆಯಾಗುತ್ತಾ ಹೋಗಿ ಮತ್ತೆ ಶುಕ್ಲಪಕ್ಷದಲ್ಲಿ ಕಳೆವೃದ್ಧಿ ಹೊಂದುವುದನ್ನೇ ಹೋಲಿಸಿ ಚಂದ್ರನು ಚಾಂದ್ರಾಯಣವನ್ನು ಮಾಡುತ್ತಿರುವನೆಂದು ಕವಿಯು ಉತ್ಪ್ರೇಕ್ಷಿಸಿರುವನು.

ಅದು ಪಿರಿಯ ಸಿರಿಯ ಬಾಳ್ಕೆಯ ।
ಲದು ಚಾಗದ ಭೋಗದಾಗರಂ ಸಕಲಸುಖ ॥
ಕ್ಕದು ಜನ್ಮಭೂಮಿಯೆನಿಸಿದು ।
ದದನಾಳ್ವಂ ಮಾರಿದತ್ತನೆಂಬ ನೃಪಾಲಂ ॥ ೩೩

ಆ ಪುರದ ತೆಂಕವಂಕದೊ ।
ಳಾವೊತ್ತುಮನೇಕಜೀವಹತಿ ತನಗೆ ಸುಖೋ ॥
ದ್ದೀಪನಮೆನಿಸುವ ಪಾಪಕ ।
ಳಾಪಂಡಿತೆ ಚಂಡಮಾರಿದೇವತೆಯಿರ್ಪಳ್ ॥ ೩೪

ತನಗರಸುವೆರಸು ಪುರಜನ ।
ಮನಿತುಮಿಷಂ ಚೈತ್ರಮೆಂಬ ತಿಂಗಳೊಳಖಿಳಾ ॥
ರ್ಚನೆವೆರಸು ಜಾತ್ರೆ ನೆರೆಯದೊ ।
ಡೆನಿತುಮನೊರ್ಮೊದಲೆ ವಿಳಯದೊಳ್ನೆರಯಿಸುವಳ್ ॥ ೩೫

ಆ ದೇವಿಯ ಜಾತ್ರೆಗೆ ಮೊಳೆ ।
ವೋದೆಳೆವೆಣ್ ಸಿರದ ಗಾಳಮುರಿಯುಯ್ಯಲೆ ಕೈ ॥
ವೋದಸುಗೆ ಕೋಕಿಲಧ್ವನಿ ।
ಮೂದಲೆಯುಲಿಯಾಗೆ ಬಂದುದಂದು ಬಸಂತಂ ॥ ೩೬

---

೩೩. ಆ ನಗರವು ಅತುಳೈಶ್ವರ್ಯಕ್ಕೆ ಜೀವನಾಧಾರವು. ತ್ಯಾಗಕ್ಕೂ, ಭೋಗಕ್ಕೂ ಗಣಿ. ಸಮಸ್ತಸುಖಗಳಿಗೂ ಜನ್ಮಸ್ಥಾನ. ಹೀಗಿರುವ ಆ ನಗರವನ್ನು ಮಾರಿದತ್ತನೆಂಬರಸನು ಆಳುತ್ತಿದ್ದನು.

೩೪. ಆ ಪುರದ ದಕ್ಷಿಣದಿಕ್ಕಿನಲ್ಲಿ ಯಾವಾಗಲೂ ಅನೇಕಪ್ರಾಣಿವಧೆ (ಬಲಿ) ಯಿಂದ ಅತ್ಯಂತಸಂತುಷ್ಟಳಾಗುವ ಪಾಪಕಾರ್ಯನಿಪುಣೆಯಾದ ಚಂಡಮಾರಿಯೆಂಬ ದೇವತೆಯ ಗುಡಿಯಿದ್ದಿತು.

೩೫. ಆ ಚಂಡಮಾರಿಯು ತನ್ನ ಪೂಜೆಗೆ ರಾಜನು ತನ್ನ ಪುರಜನರೊಡನೆ ಆಶ್ವಯುಜ ಮತ್ತು ಚೈತ್ರಮಾಸಗಳಲ್ಲಿ ಸಕಲಪೂಜಾದ್ರವ್ಯಗಳೊಡನೆ ಬಂದು ಜಾತ್ರೆಕೂಡದಿದ್ದರೆ ಕೂಡಲೇ ಎಲ್ಲರನ್ನೂ ನಾಶಮಾಡುತ್ತಿದ್ದಳು.

೩೬. ಉದಯಿಸಿ ಬಂದ (ಅಷ್ಟಮಿಯ ಅರ್ಧ ಚಂದ್ರ) ಚಂದ್ರನು ತಲೆಯಲ್ಲಿ ಹಾಕಿಕೊಳ್ಳುವ ಗಾಳದಂತೆಯೂ, ಚಿಗುರಿರುವ ಅಶೋಕವೃಕ್ಷವು ಉರಿಯುಯ್ಯಾಲೆಯಂತೆಯೂ, ಕೋಗಿಲೆಯ ಧ್ವನಿಯು ತೂಳಗಬಂದವರ ಮೂದಲೆಮಾತಿನಂತೆ ತೋರುತ್ತಿರಲು ವಸಂತರುತುವು ಮಾರಿಯ ಜಾತ್ರೆ

---

೨. ತೆಂಕ+ಪಕ್ಷ, ತದ್ಭವ ವಂಕ—ಪಕ್ಕ—ತೆಂಕವಂಕ =ದಕ್ಷಿಣ ಭಾಗ.

ಸಿಸಿರಮನೆ ಪಿಡಿದು ಪರಕೆಗೆ ।
ಬಸಂತನಲರ್ವೊದ ಮಾವಿನಡಿಮಂಚಿಕೆ-ಯೊಳ್ ॥
ಕುಸುರಿದಱಿದಡಗಿನಂತೆವೊ ।
ಲೆಸೆದುವು ತದ್ವನದೊಳುದಿರ್ದ ಮುತ್ತುದ ಮುಗುಳ್ಗಳ್ ॥ ೩೭

ಮಾರಿಮಲಯಾನಿಲಂ ವನ ।
ನೀರಜವನಮೆಂಬ ಕೆಂಡದೊಳ್ ದಂಡನಮು ।
ಸ್ಕ್ಯಾರಂ ಬಂದಪನಿತ್ತುವ ।
ಥಾರಿಪುದೆಂಬಂತೆಯುಲಿದುವರಗಿಳಿ ಬನದೊಳ್ ॥ ೩೮

---

ಯಲ್ಲಿ ಹರಕೆಯನ್ನೊಪ್ಪಿಸಲು ಬಂದಂತೆ ತೋರುತ್ತಿದ್ದಿತು. (ಜಾತ್ರೆಗಳಲ್ಲಿ ಹರಕೆಯನ್ನೊಪ್ಪಿಸಲು ಬರುವವರು ತಲೆಯಲ್ಲಿ ಗಾಳವನ್ನೂ ಬಾಯಿಬೀಗ ಳನ್ನೂ ಹಾಕಿಕ್ಕೊಂಡು ಕೈಯಲ್ಲಿ ಉರಿಯುವ ಪಂಜುಗಳನ್ನು ಹಿಡಿದು ಕೊಂಡು ಬೇಕಾದಹಾಗೆ ಬಾಯಲ್ಲಿ ಕೂಗಿಕೊಳ್ಳುತ್ತಾ ಬರುವುದುಂಟು. ಈಗಲೂ ಮಾರಿಯ ಹಬ್ಬಗಳಲ್ಲಿ ಈ ಪದ್ಧತಿಯಿದೆ. ವಸಂತಾಗಮನವನ್ನು ಕವಿಯು ಮಾರಿಯ ಜಾತ್ರೆಗೆ ಬಂದಂತೆ ಚಾತುರ್ಯದಿಂದ ವರ್ಣಿಸಿರುವನು. ಇದರಿಂದ ಆ ಸ್ಥಳದ ಅಚೇತನ ವಸ್ತುಗಳಲ್ಲಿಯೂ ಮಾರಿಯ ಹಬ್ಬದ ಸಂಸ್ಕೃತಿಯು ಮೂಡಿತ್ತೆಂದು ವರ್ಣಿಸಿ ಕವಿಯು ಆ ಮಾರಿಯ ಹಬ್ಬದ ದಾರ್ಢ್ಯ ವನ್ನು ಸೂಚಿಸಿರುವನು ಎಂದು ಹೇಳಬಹುದು.

೩೭. ಹೂ ಬಿಟ್ಟಿರುವ ಮಾವಿನಗಿಡಿಗಳ ಮೇಲೆ ಉದುರಿದ್ದ ಕೆಂಪಾದ ಮುತ್ತುಗದ ಹೂವುಗಳು ತಳಗಣ ಮಂಚದ ಮೇಲೆ ಹರಡಿದ್ದ ಮಾಂಸದ ತುಂಡುಗಳಂತೆ ತೋರುತ್ತಿರುವುದು. ವಸಂತರುತುವು ಶಿಶಿರರುತುವನ್ನು ಹಿಡಿದುತಂದು ಮಾರಿಗೆ ಬಲಿಯೊಪ್ಪಿಸಿದಂತೆ ತೋರುತ್ತಿದ್ದಿತು (ದೇವಿಗೆಬಲಿ ಕೊಟ್ಟಪ್ರಾಣಿಗಳಮಾಂಸವನ್ನು ಒಂದು ಚಿಕ್ಕ ಚಪ್ಪರದ ಮೇಲೆ ಹರಡಿ ಒಣಗಿಸುವ ಪದ್ಧತಿಯನ್ನು ಕವಿಯು ಇಲ್ಲಿ ಚಿತ್ರಿಸಿರುವನು).

೩೮. ಮಾರಿಯೆಂಬ ಮಲಯಮಾರುತನು ಅರಳಿರುವ ಕೆಂದಾವರೆಗಳೆಂಬ ಕೆಂಡದಮೇಲೆ ಇತ್ತ ನಡೆಯುತ್ತ ಬರುತ್ತಿರುವನು ನೋಡಿ ಎಂದು ಹೇಳು ವಂತೆ ತೋರುತ್ತಿದ್ದಿತು ಅರಗಿಳಿಯ ಕೂಗುಗಳು. (ವಸಂತರುತುವಿನಲ್ಲಿ ಉಂಟಾಗುವ ಮಂದಮಾರುತ, ಕೆಂದಾವರೆಗಳ ವಿಕಸನ, ಅರಗಿಳಿಗಳ ಕೂಗು—ಇವುಗಳು ವಿಚಿತ್ರರೀತಿಯಲ್ಲಿ ವರ್ಣಿಸಲ್ಪಟ್ಟಿವೆ. ಮಾರಿಯ ಜಾತ್ರೆಗಳಲ್ಲಿ ಆವೇಶಬಂದ ಭಕ್ತರು ಕೆಂಡಗಳಮೇಲೆ ನಡೆಯುವರು ; ಇದಕೆ ಕೆಂಡಹಾಯುವುದೆಂದೂ ಮಾರಿಯಕೊಂಡವೆಂದೂ ಪ್ರಸಿದ್ಧವು).

ಅಂತು ದೊರೆವೆತ್ತು ಬಂದ ಬ।
ಸಂತದೊಳಾ ಮಾರಿದತ್ತನುಂ ಪುರಜನಮುಂ ॥
ತಂತಮಗೆ ಚಂಡಮಾರಿಗೆ।
ಸಂತಸಮಂ ಮಾಡಲೆಂದು ಜಾತ್ರೆಗೆ ನೆರೆದರ್ ॥ ೩೯

ಸುರಿಗಿಱಿದರ್ಚನೆಮಾಡುವ।
ಪಕೆರಯನೊಪ್ಪಿಸುವ ಲಕ್ಕಲೆಕ್ಕದ ಲೆಂಕ।
ರ್ವೆರಸು ಬಲವಂದು ದೇವಿಯ
ಚರಣಂಗಳ್ಗೆಱಗಿ ರಂಗಮಂಟಪದೆಡೆಯೊಳ್ ॥ ೪೦

ನಿಂದು ನರಪತಿ ತಳಾಱಂ।
ಗೆಂದಂ ನೀಂ ಬರಿಸು ಮನುಜಯುಗಮಂ ಮುನ್ನಂ ॥
ಕೊಂದರ್ಚಿಸುವೆಂ ಪೂಜೆಯೊ।
ಳೆಂದಿನ ಪರಿತಪ್ಪೆ ದೇವಿ ತಪ್ಪದೆ ಮಾಣಳ್ ॥ ೪೧

---

೩೯. ಜಾತ್ರೆಗಾಗಿ ಬರುತ್ತಿರುವುದೋ ಎಂಬ ಹೋಲಿಕೆಯನ್ನು ಹೊಂದಿ ಬಂದ ವಸಂತರುತುವಿನಲ್ಲಿ (ಚೈತ್ರಮಾಸದಲ್ಲಿ) ರಾಜನಾದ ಮಾರಿದತ್ತನೂ, ಪುರಜನರೂ ಮಾರಿಯನ್ನು ಪೂಜಿಸಿ ಸಂತೋಷಪಡಿಸಲು ತಾವು ತಾವಾಗಿಯೇ ಜಾತ್ರೆಗೆ ಬಂದು ಸೇರಿದರು.

೪೦-೪೩. ಹರಕೆಗಾಗಿ ಕತ್ತಿಗಳನ್ನು ದೇಹದಲ್ಲಿ ಚುಚ್ಚಿಕೊಂಡು ಪೂಜೆಮಾಡುವ ಇನ್ನೂ ಹಲವು ಬಗೆಯ ಹರಕೆಗಳನ್ನೊಪ್ಪಿಸುವ ಅಸಂಖ್ಯಭಟರುಗಳೊಡನೆ ರಾಜನು ಬಂದು ಚಂಡಿಯನ್ನು ಪ್ರದಕ್ಷಿಣೆಮಾಡಿ ನಮಸ್ಕರಿಸಿ ರಂಗಮಂಟಪ (ಪ್ರಾಣಿಗಳನ್ನು ಬಲಿಗೊಡುವ ಪೀಠ) ದ ಸಮೀಪದಲ್ಲಿ ಬಂದು ನಿಂತುಕೊಂಡು ತನ್ನ ತಳವಾರನನ್ನು ಕುರಿತು "ಮನುಷ್ಯರಿಬ್ಬರನ್ನು ಬರಮಾಡು. ಅವರನ್ನು ಬಲಿಗೊಟ್ಟು ದೇವಿಯನ್ನು ಪೂಜಿಸುವೆನು. ಪೂಜೆಯಲ್ಲಿ ಎಂದಿನ ಈ ಪದ್ಧತಿಯು ತಪ್ಪಿದರೆ ದೇವಿಯು ಕೋಪಿಸಿಕೊಳ್ಳದಿರುವುದಿಲ್ಲ. ಪಟ್ಟಣಿಗರೆಲ್ಲರೂ ಅನೇಕಪ್ರಾಣಿಗಳನ್ನು ಬಲಿಗೊಡಬೇಕಾಗಿರುವುದು ಕಾಲವಿಳಂಬವಾಗುವುದು ಆದ್ದರಿಂದ ಶೀಘ್ರವಾಗಿ ಹೋಗಿತಾ" ಎಂದು ಅಪ್ಪಣೆಯಿತ್ತನು. ತಳವಾರನು "ಅಪ್ಪಣೆ ನಾನು ಕಳುಹಿಸಿರುವ ನನ್ನ ಕಿಂಕರರು ತಾರದೆ ಇರರು" ಎಂದು ಹೇಳುತ್ತ ಬಲಿಗಾಗಿ ತರಬೇಕಾದ ಸಣ್ಣ ವಯಸ್ಸಿನವರೂ, ಶುಭಲಕ್ಷಣದಿಂದ ಕೂಡಿದವರೂ, ಬುದ್ಧಿವಂತರೂ,

ತಡವಾದಪ್ಪುದು ಪೌರರ್ |
ಕುಡವೇಳ್ಪ್ವುದು ಪಲವು ಜೀವರಾಶಿಯ ಬಲಿಯಂ ||
ನಡೆಯೆನೆ ಹಸಾದವೆಂದಾಗಳೆ |
ಪಿಡಿತಾರದೆ ಮಾಣರೆನ್ನ ಕಿಂಕರರೆನುತುಂ || ೪೨

ಕಿಱುವರೆಯದ ಶುಭಲಕ್ಷಣ |
ದಱಿಕೆಯ ಸತ್ಕುಲದ ಮರ್ತ್ಯಯುಗಲಕಮಂ ತಾ ||
ನಱಸಲ್ ಬಳರಿಯ ಬನದಿಂ |
ಪೊರಮಟ್ಟಂ ಚಂಡಕರ್ಮನೆಂಬ ತಳಾಱಂ || ೪೩

ಇತ್ತಲ್ಬಟಿಕ್ಕೆ ಪಂಚಶ |
ತೋತ್ತಮಯತಿಸಮಿತಿವೆರಸು ಗಮನಪ್ರಾಯ ||
ಶ್ಚಿತ್ತನಿಮಿತ್ತಂ ಬಂದು ಸು |
ದತ್ತಾಚಾರ್ಯರ್ ಪುರೋಪವನಮಂ ಸಾರ್ದರ್ || ೪೪

ಅವರ ಗುಣಮವರ ಸಂಯಮ |
ಮವರ ತಪಶ್ಚರಣಮೆಂಬುದವರಿವರಳವ ||
ಲ್ಲವರ ಪೆಸರ್ಗೊಂಡ ನಾಲಗೆ |
ಸವಿದಱಿಯದು ಬಳಿಕ ತಾಯ ಮೊಲೆವಾಲ್ಸವಿಯಂ || ೪೫

---

ಸತ್ಕುಲಪ್ರಸೂತರೂ ಆಗಿರುವ ಮಾನವಯುಗಲ (ಇಬ್ಬರು) ವನ್ನು ಹುಡುಕಲು ತಳವಾರ ಚಂಡಕರ್ಮನೆಂಬುವನು ತಾನೇ ಆ ಮಾರಿಯವನದಿಂದ ಹೊರಟನು.

೪೪. ಬೇರೊಂದೆಡೆಯಲ್ಲಿ ಸುದತ್ತಾಚಾರ್ಯರೆಂಬ ಮುನಿಶ್ರೇಷ್ಠರೊಬ್ಬರು ಐದುನೂರುಮಂದಿ ಉತ್ತಮಶಿಷ್ಯರೊಡನೆ ಗಮನಪ್ರಾಯಶ್ಚಿತ್ತಕ್ಕಾಗಿ ಬರುತ್ತಾ ಆ ರಾಜಪುರದ ಮುಂದಣ ಉಪವನದಲ್ಲಿ ಬಂದು ಸೇರಿದರು.

೪೫. ಆ ಸುದತ್ತಾಚಾರ್ಯರ ಗುಣ, ತಪಶ್ಚರಣ ವ್ರತ ಇವುಗಳು ಅವರಿವರಿಗೆ–ಸಾಮಾನ್ಯರಿಗೆ ಸಾಧ್ಯವಿಲ್ಲ. ಅವರ ಹೆಸರನ್ನೊಮ್ಮೆ ಸ್ತೋತ್ರಮಾಡಿದ ನಾಲಗೆಯು ಮತ್ತೊಂದುಸಾರಿ ತಾಯಿಯ ಮೊಲೆಹಾಲಿನ ರುಚಿಯನ್ನು ಕಾಣುತ್ತಿರಲಿಲ್ಲ (ಅಂದರೆ ಸ್ತೋತ್ರಮಾಡಿದವರು ಪುನರ್ಜನ್ಮವನ್ನು ಪಡೆಯುವುದಿಲ್ಲ. ಮೋಕ್ಷವನ್ನೇ ಹೊಂದುವರೆಂದು ಭಾವವು).

ಮುನಿಸಮುದಾಯಸಮೇತಂ ।
ವಿನೇಯಜನವನಜವನದಿವಾಕರನಂತಾ ॥
ಮುನಿಪನುಪವಾಸಮಂ ಪ ।
ರ್ವನಿಮಿತ್ತಂ ತಳೆದು ಬಳಿಕ ಬಾಳಕಯುಗಮಂ ॥ ೪೭

ಚರಿಗೆಗೆ ಬೀಟ್ಟಡೆ ಗುರುಗಳ ।
ಚರಣಕ್ಕಾಯುಗಲಮೆಱಗಿ ಪೊರಮಟ್ಟಾಗಳ್ ॥
ತರುಣವನಹರಿಣಯುಗಮಂ ।
ತರಕ್ಷು ಪಿಡಿವಂತೆ ಚಂಡಕರ್ಮಂ ಪಿಡಿದಂ ॥ ೪೭

ಅಭಯರುಚಿಯಭಯಮತಿಯಂ ।
ಬುಭಯಮನಾ ಪಾಪಕರ್ಮನುಯ್ವೆಡೆಯೊಳ್ ॥
ತ್ತಭಯರುಚಿ ತಂಗೆಗೆಂದಪ ।
ನಭೀತೆಯಾಗೆಲೆಗೆ ತಾಯೆ ಮರಣದ ದೆಸೆಯೊಳ್ ॥ ೪೮

ನಿಯತಿಯನಾರ್ ಮೀಱಿದಪರ್ ।
ಭಯಮೇವುದೊ ಮುಟ್ಟಿದೆಡೆಗೆ ಸೈರಿಸುವುದೆ ಕೇಳ್ ॥
ನಯವಿದೆ ಪೆತ್ತ ಪರೀಷಹ ।
ಜಯಮೆ ತಪಂ ತಪಕೆ ಬೇಱೆ ಕೋಡೆರಡೊಳವೆ ॥ ೪೯

---

೪೬-೪೭. ಭವ್ಯರೆಂಬ ಕಮಲಗಳ ಸಮೂಹಕ್ಕೆ ಸೂರ್ಯನಂತಿದ್ದ ಸುದತ್ತಾಚಾರ್ಯರು ತಮ್ಮ ಶಿಷ್ಯಸಮುದಾಯದೊಡನೆ ಪರ್ವನಿಮಿತ್ತವಾಗಿ ಉಪವಾಸವನ್ನು ಸ್ವೀಕರಿಸಿದ್ದರು. ತಮ್ಮ ಶಿಷ್ಯಸಮುದಾಯದಲ್ಲಿ ಹಸಿವನ್ನು ತಡೆಯಲಾರದಿದ್ದ ಸಣ್ಣವಯಸ್ಸಿನ ಬಾಲಕರಿಬ್ಬರನ್ನು ಚರಿಗೆಗೆ–ಆಹಾರಕ್ಕೆಂದು ಕಳುಹಿಸಿಕೊಟ್ಟರು. ಆ ಬಾಲಕರಿಬ್ಬರೂ ಗುರುಗಳ ಪಾದಕ್ಕೆ ನಮಸ್ಕರಿಸಿ ಹೊರಟು ಬರುವಾಗ ಅರಣ್ಯದಲ್ಲಿ ಓಡಾಡುತ್ತಿರುವ ಎರಡು ಜಿಂಕೆಯ ಮರಿಗಳನ್ನು ಹುಲಿಯು ಹಿಡಿದುಕೊಳ್ಳುವಂತೆ ಮಾರಿದತ್ತ ರಾಜನ ತಳವಾರ ಚಂಡಕರ್ಮನು ಆ ಮಕ್ಕಳನ್ನು ಹಿಡಿದುಕೊಂಡನು.

೪೮-೪೯. ಆ ಪಾಪಕರ್ಮಿಯಾದ ಚಂಡಕರ್ಮನು ಕರೆದುಕೊಂಡು ಹೋಗುತ್ತಿದ್ದಾಗ ಬಾಲಕರಲ್ಲಿ ಹಿರಿಯನಾದ ಅಭಯರುಚಿಯೆಂಬ ಕುಮಾರನು ತನ್ನ ತಂಗಿಯಾದ ಅಭಯಮತಿಗೆ "ಎಲೆ ತಂಗಿ! ಮರಣಕ್ಕಾಗಿ ಹೆದರಬೇಡ, ಅಭೀತೆಯಾಗಿರು. ವಿಧಿನಿಯಮವನ್ನು ಮೀರುವರಾರು? ಹಿಡಿದುಕೊಂಡ

ಅಣ್ಣನಮಾತಂ ಮನದೊಳ್ ।
ತಿಣ್ಣಂ ತಳೆದೆಂದಳನುಜೆ ಮಾಡಿದುದಂ ನಾ ॥
ವುಣ್ಣದೆ ಪೋಕುಮೆ ಭಯಮೇ ।
ಕಣ್ಣ ಭವಪ್ರಕೃತಿವಿಕೃತಿ ನಾವಱಿಯದುದೇ ॥ ೫೦

ಎನಿತೊಳವಪಾಯಕೋಟಿಗ ।
ಳನಿತರ್ಕಂ ಗೇಹಮಲ್ತೆ ದೇಹಮಿದಂ ನೆ ॥
ಟ್ಟನೆ ಪೊತ್ತು ಸುಖಮನಱಸುವ ।
ಮನುಜಂ ಮೊರಡಿಯೊಳೆ ಮಾದುಪಟಮಱಸದಿರಂ ॥ ೫೧

ಬೇಡಿದ ಕಾಡೊಳ್ ಮೞಯಾ ।
ಯ್ತಾಡಾಡುವಮಿದಱ ಪೊಱಯನೆಮಗಂ ನಿಮಗಂ ॥
ಮೂಡುವ ಮುೞುಗುವ ದಂದುಗ ।
ಮಾಡಿದ ಹೊಲನುಂಡ ಮರ್ದು ಕಂಡ ವಿಚಾರಂ ॥ ೫೨

---

ಮಾತ್ರಕ್ಕೇ ಭಯವೇನು ? ಇದು ನ್ಯಾಯ. ಪರೀಷಹಗಳನ್ನು ಜಯಿಸು ವುದೇ ತಪಸ್ಸು (೨೨ ಪರೀಸಹಗಳಲ್ಲಿ ಭಯವೂ ಒಂದು). ಹಾಗಿಲ್ಲದಿದ್ದರೆ ತಪಸ್ಸಿಗೆ ಬೇರೇ ಮಹತ್ವವೇನಿದೆ ? ” ಎಂದು ಹೇಳಿದನು.

೫೦-೫೧. ಅಣ್ಣನು ಹೇಳಿದ ಮಾತನ್ನು ಕೇಳಿ ಅದರ ಅರ್ಥವನ್ನು ಚನ್ನಾಗಿ ತಿಳಿದುಕೊಂಡು ತಂಗಿಯು ಅಣ್ಣನನ್ನು ಕುರಿತು “ ನಾವು ಮಾಡಿದ ಪಾಪ ಕರ್ಮದ ಫಲವನ್ನು ನಾವು ಉಣ್ಣದೆ ತೀರುವುದೆ ? ಅಣ್ಣ ಇದಕ್ಕಾಗಿ ಭಯ ವೇಕೆ ? ಸಂಸಾರದಲ್ಲಿನ ಬದಲಾವಣೆಗಣನ್ನು (ಸಹಜವಾದ ಹಾಗೂ ಅಸ ಹಜವಾದ ಘಟನೆಗಳು) ನಾವು ತಿಳಿದಿಲ್ಲವೇ ? ಎಷ್ಟು ಕೋಟಿ ಅಪಾಯ ಗಳುಂಟಾಗಬಹುದೋ ಅಷ್ಟೆಲ್ಲಾ ಅಪಾಯಗಳಿಗೂ ತವರ್ಮನೆಯಂತಿರುವ ಈ ಶರೀರವನ್ನು ಧರಿಸಿ ಇದರಲ್ಲಿ ಸುಖವನ್ನು ಹುಡುಕುವ ಮನುಷ್ಯನು ಕಲ್ಲಿನಗುಡ್ಡಭೂಮಿಯಲ್ಲಿ ಮಾದಲದ ಹಣ್ಣನ್ನು ಹುಡುಕದಿರನು ” (ಗುಡ್ಡ ದಲ್ಲಿ ಮಾದಲದಹಣ್ಣು ಸಿಕ್ಕುವುದು ಹೇಗೆ ಅಸಾಧ್ಯವೋ ಹಾಗೆಯೇ ಈ ದೇಹಧಾರಣೆಯಲ್ಲಿ (ಸಂಸಾರದಲ್ಲಿ) ಸುಖ ಸಿಕ್ಕುವುದು ಅಸಾಧ್ಯವೆಂದು ಭಾವವು).

೫೨. “ ಮಳೆಬೇಕೆಂದ ಸ್ಥಳದಲ್ಲಿಯಾದಂತಾಗಿದೆ. ನಾವೀದುಃಖಕ್ಕೆ ನೆಲೆ ವನೆಯಾದ ಶರೀರದ ಭಾರವನ್ನು ಕಳೆದುಕೊಳ್ಳೋಣವೆಂದಿದ್ದ ನಮ್ಮ ಇಷ್ಟ

ಅಂತೋರೊರ್ವರನೊರ್ವರ್ ।
ಸಂತೈಸುತ್ತುಂ ನೃಪೇಂದ್ರತನುಜಾತರ್ ನಿ ॥
ಶ್ಚಿಂತಂ ಪೊಕ್ಕರ್ ಪಸಿದ ಕೃ ।
ತಾಂತನ ಬಾಣಸುವೊಲಿರ್ದ ಮಾರಿಯ ಮನೆಯಂ ॥ ೫೩

ತಳಮನುಡಿದಿಡುವ ಕಣ್ಣಂ ।
ಕಳೆದೇಱಿಪ ಕರುಳ ತೋರಣಂಗಟ್ಟುವ ಕಾ ॥
ಲ್ಗಳನುರುಪಿ ನೆತ್ತರಿಂ ಕೂ ।
ಟ್ಗಳನಡುತಿಹ ಬೀರರೆತ್ತ ನೋಟ್ಪೊಡಮುದಱೊಳ್ ॥ ೫೪

ತಾಳುಗೆಯನುರ್ಚಿ ನೆತ್ತಿಯ ।
ಗಾಳಂ ಗಗನದೊಳೆಟಲ್ವ ವಾರಿಯ ಬೀರರ್ ॥
ಪಾಳಿಯೊಳೆಸೆದರ್ಪಾಪದ ।
ಜೋಳದ ಬೆಳಸಿಂಗೆ ಬೆರ್ಚುಗಟ್ಟಿದ ತೆಱದಿಂ ॥ ೫೫

---

ದಂತೆಯೇ ಈಗ ಸಾವು ಒದಗಿದೆ. ನಮಗಂತೂ ತೊಂದರೆಗಳ ಏರಿಳಿತ ಗಳು ನಾವು ಆಟವಾಡಿ ಕಂಡಸ್ಥಳ, ಕುಡಿದರಿಂದ ಔಷಧಿ, ಎಲ್ಲವೂ ನಮಗೆ ತಿಳಿದ ವಿಚಾರವೇ'' ಎಂದು ಉತ್ತರ ಹೇಳಿದಳು. (ಎಂದರೆ ನಾವು ಇದುವರೆಗೆ ಹಲವುಸಾರಿ ತಿರ್ಯಗ್ಜಂತುಗಳಾಗಿ ಜನ್ಮವೆತ್ತಿ ಬಹಳ ದುಃಖ ವನ್ನನುಭವಿಸಿಲ್ಲವೇ ? ಎಂದು ಹಿಂದಿನ ಜನ್ಮಗಳನ್ನು ನೆನೆಸಿ ಹೇಳಿದುದು.)

೫೩. ಈರೀತಿಯಾಗಿ ಒಬ್ಬರನ್ನೊಬ್ಬರು ಸಂತೈಸುತ್ತ ರಾಜನ ಮಕ್ಕಳಾದ ಅವರೀರ್ವರೂ ನಿಶ್ಚಿಂತಮನಸ್ಸಿನಿಂದ ಹಸಿದ ಯಮನ–ಮೃತ್ಯುವಿನ–ಅಡಿಗೆ ಯ ಮನೆಯಂತಿದ್ದ ಆ ಮಾರಿಯ ಗುಡಿಯನ್ನು ಪ್ರವೇಶಿಸಿದರು.

೫೪. ಆ ಮಾರಿಯ ಗುಡಿಯಲ್ಲಿ ಪ್ರಾಣಿಗಳ ಕಾಲುಗಳನ್ನು ಕತ್ತರಿಸಿ ಬಿಸಾಡುವ, ಕಣ್ಣುಗಳನ್ನು ಕಿತ್ತು ಮೇಲಕ್ಕೆಸೆಯುವ, ಕರುಳನ್ನು ಕಿತ್ತು ತೋರಣಕಟ್ಟುವ, ಕಾಲುಗಳನ್ನು ಬೇಯಿಸಿ ಬಸಿದ ರಕ್ತದಿಂದ ಅನ್ನವನ್ನು ಮಾಡುತ್ತಿರುವ ಭಟರುಗಳೇ ಎತ್ತಕಡೆ ನೋಡಿದರೂ ಕಂಡುಬರುತ್ತಿದ್ದರು.

೫೫. ಅಂಗುಳಲ್ಲಿ ಚುಚ್ಚಿಕೊಂಡು ನೆತ್ತಿಯಗಾಣದಿಂದ ಅಂತರಾಳದಲ್ಲಿ ನೇತಾಡುವ, ಕತ್ತಿಗಳನ್ನು ಹಿಡಿದುಕೊಂಡು ಓಡಾಡುವ ಭಟರ ಸಾಲುಗಳು ಪಾಪವೆಂಬ ಜೋಳದ ಬೆಳಸಿಗೆ ಬೆರ್ಚುಗಟ್ಟಿದಂತೆ ತೋರುತ್ತಿದ್ದಿತು. (ಜೋಳದ ಬೆಳಸಿಗೆ ಬೀಳುವ ಹಕ್ಕಿಗಳನ್ನು ಓಡಿಸಲು ಮನುಷ್ಯರ ತಲೆಯ ಆಕಾರವನ್ನು ಮಾಡಿ ಎತ್ತರವಾದ ಸ್ಥಳದಲ್ಲಿ ಜೋಲುಬಿಡುವರು; ಅದರ ಹೋಲಿಕೆ ಇರಬಹುದು.)

ಆಡು ಕುಱಿ ಕೋೞಿ ಕೋಣನ ।
ಕೂಡಿದ ಪಿಂಡೊಳಱಿ ಪೆಳಱಿ ಮಾರ್ದನಿಯಿಂದಂ ॥
ಕೂಡೆ ವನಮೞ್ತುದುರ್ವರೆ ।
ಬೀಡೆಯಿನೆರ್ದೆಯೊಡೆದುದವಱ ಕೋಟಲೆಗಾಗಳ್ ॥ ೫೬

ದೆಸೆದೆಸೆಗೆ ನರಶಿರಂ ತೆ ।
ತ್ತಿಸಿ ಮೆಱೆದುವು ಮಗಿಲೊಳಬ್ಬೆ ಪೇರಡಗಿನ ಪೆ ॥
ರ್ಚಿಸನದೆ ಪೋಱಗಣ ಜೀವ ।
ಪ್ರಸರಮುಮಂ ಪಲವು ಮುಖದಿನವಳೋಕಿಪವೋಲ್ ॥ ೫೭

ಭೈರವನ ಜವನ ಮಾರಿಯು ।
ಮೂರಿಯವೋಲ್ ನಿಂದ ಮಾರಿದತ್ತಂ ಲಲಿತಾ ॥
ಕಾರರ ಧೀರರ ಬಂದ ಕು ।
ಮಾರರ ರೂಪಿಂಗೆ ಠಕ್ಕಂಗೊಂಡಂತಿರ್ದಂ ॥ ೫೮

---

೫೬. ಬಲಿಗಾಗಿ ಹಿಡಿದುತಂದಿದ್ದ ಆಡು, ಕುರಿ, ಕೋಳಿ, ಕೋಣ ಈ ಪ್ರಾಣಿಗಳ ಗುಂಪು ಭಯದಿಂದ ಕಿರಚಿಕೊಳ್ಳುವ ದೀನಧ್ವನಿಗೆ ಆ ವನವೇ ಅಳುತ್ತಿರುವಂತೆ ಕಾಣುತ್ತಿದ್ದಿತು. ಪ್ರಾಣಿಗಳು ಪ್ರಾಣಬಿಡುವಾಗ ಒದೆದಾಡುವ ಕೈಕಾಲುಗಳ ಬಡಿತಕ್ಕೆ ಭೂಮಿಯೇ ಎದೆಯೊಡೆದು ಬಿರಕಲುಗಳುಳ್ಳದ್ದಾಗಿದ್ದಂತೆ ತೋರುತ್ತಿದ್ದಿತು.

೫೭. ಎಲ್ಲಾ ದಿಕ್ಕುಗಳಲ್ಲಿಯೂ ಆ ಗುಡಿಯ ಪ್ರಾಕಾರದ ಗೋಡೆಯಲ್ಲಿ ಮಾಡಿ ಸೇರಿಸಿದ್ದ ಮನುಷ್ಯರ ತಲೆಗಳ ಆಕಾರವು ಮಾರಿಯೇ ಮಾಂಸಲೋಲುಪತೆಯಿಂದ ಬಲಿಗಾಗಿ ತರಲ್ಪಟ್ಟಿದ್ದ ಅಸಂಖ್ಯಾತ ಪ್ರಾಣಿಗಳ ಸಮೂಹವನ್ನು ಅನೇಕ ಮುಖಗಳನ್ನು ಮಾಡಿಕೊಂಡು ನೋಡುತ್ತಿರುವಳೋ ಎನ್ನುವ ಹಾಗೆ ತೋರುತ್ತಿದ್ದಿತು.

೫೮ ಕಾಲಭೈರವನ ಅಥವಾ ಯಮನ ಅಥವಾ ಮಾರಿಯ ಕಟವಾಯಿಯಂತೆ ಕತ್ತಿಹಿಡಿದು ನಿಂತಿದ್ದ ಮಾರಿದತ್ತರಾಜನು ಚಂಡಕರ್ಮನಿಂದ ತರಲ್ಪಟ್ಟ ಸುಂದರರೂ, ಧೀರರೂ ಆಗಿದ್ದ ಆ ಕುಮಾರರ ಮನೋಹರವಾದ ರೂಪನ್ನು ನೋಡಿ ಆಶ್ಚರ್ಯದಿಂದ ಸ್ತಬ್ಧನಾಗಿ ನಿಂತನು.

ಅರಸನ ಕೆಲಬಲದವರ್ಗಳ್ ।
ಪರಸಿರೆ ಪರಸಿರೆ ನೃಪೇಂದ್ರನಂ ನೀವೆನೆ ಮಂ ॥
ದರಧೀರನಭಯರುಚಿ ನೃಪ ।
ವರ ನಿರ್ಮಲಧರ್ಮದಿಂದೆ ಪಾಲಿಸು ಧರೆಯಂ ॥ ೫೯

ಎಂದು ಪರಸಿದೊಡೆ ಪೊಯ್ಯದೆ ।
ನಿಂದು ನೃಪಂ ಮನದೊಳೆಂದನೀ ದೇಗುಲಮಂ ॥
ಬಂದು ಪುಗಲೊಡನೆ ಜೀವಂ ।
ನಿಂದಱಿಯದು ಮುನ್ನಮಿನ್ನರಂ ಕಂಡಱಿಯೆಂ ॥ ೬೦

ಕೆಟ್ರಿ ಕರವಾಳ್ಗಮೆನಗಂ ।
ಮಿಟ್ರುವಿನಂತಿರ್ದ ಮಾರಿಗಂ ಬೆದಱದೆ ನಿಂ ॥
ದಟ್ರಿಯನೆ ನುಡಿವರಿವರ ನೆ ।
ಗಟ್ರಿ ಕರಂ ಪಿರಿದು ಧೀರರಕಟ ಕುಮಾರರ್ ॥ ೬೧

---

೫೯-೬೨. ಆ ರಾಜನ ಸುತ್ತುಮುತ್ತಲೂ ನಿಂತಿದ್ದ ಜನರು ಬಲಿಗೆಂದು ಬಂದವರಿಗೆ "ನೀವು ರಾಜನನ್ನು ಹರಸಿ ಹರಸಿ" ಎಂದು ಹೇಳಲು ಮಂದರ ಪರ್ವತದಂತೆ ಧೀರನಾದ ಅಭಯರುಚಿಯು "ಎಲೈ ರಾಜಶ್ರೇಷ್ಠನೆ! ನಿರ್ಮಲವಾದ ಧರ್ಮದಿಂದ ರಾಜ್ಯವನ್ನಾಳು" ಎಂದು ಆಶೀರ್ವಾದ ಮಾಡಲು, ರಾಜನವರನ್ನು ಕತ್ತರಿಸದೆ ಸುಮ್ಮನೆ ನಿಂತುಕೊಂಡು ಹೀಗೆಂದು ಯೋಚಿಸಿದನು. ಈ ಮಾರಿಯ ಗುಡಿಗೆ ಬಂದೊಡನೆಯೇ ಭಯದಿಂದ ಪ್ರಾಣಿಗಳ ಜೀವವೇ ಹೋದಂತಿರುತ್ತಿದ್ದಿತು. ಈ ಕುಮಾರರ ಧೈರ್ಯವೇ ಧೈರ್ಯ. ಹಿಂದೆ ಯಾವಾಗಲೂ ಇಂತಹ ಧೀರರನ್ನು ಕಂಡದ್ದೇ ಇಲ್ಲ. ನನ್ನ ಕೈಯಲ್ಲಿರುವ ಒರೆಗಳೆದ ಕತ್ತಿಗೂ, ನನಗೂ, ಮೃತ್ಯುವಿನಂತಿರುವ ಈ ಮಾರಿಗೂ, ಸ್ವಲ್ಪವೂ ಭಯಪಡದೆ ಪ್ರೀತಿಯಿಂದ ಹರಸುತ್ತಿರುವ ಇವರ ಧೈರ್ಯವು ಬಹಳ ಹೆಚ್ಚಿನದು (ಮಹತ್ತಾದುದು), ಆಹಾ! ಈ ಕುಮಾರರು ಅತ್ಯಂತಧೀರರು. ಎರಡು ಚಂದ್ರಬಿಂಬಗಳು ಮನುಷ್ಯರೂಪದಿಂದ ಭೂಮಿಗೆ ಬಂದು ಹುಟ್ಟಿದಂತೆ ಇವರ ಕಾಂತಿಯು ಪ್ರಕಾಶಿಸುತ್ತಿರುವುದು. ಇವರ ಸೌಂದರ್ಯವು ಕಣ್ಣಿಗೆ ಸಕ್ಕರೆಯಂತಿರುವುದು. ಈಗ ಇವರನ್ನು ನೋಡಿದೆನು. (ಸಕ್ಕರೆಯು ನಾಲಿಗೆಗೆ ಹೇಗೆ ಮಾಧುರ್ಯ (ಸಿಹಿ) ವನ್ನು ಕೊಡುವುದೋ ಹಾಗೆ ಕಣ್ಣುಗಳಿಗೆ ಚರಿತಾರ್ಥತೆಯನ್ನುಂಟುಮಾಡುವವರೆಂದು ಭಾವವು).

ಜನಳಿವೆಱ ಮನುಜರೂಪದಿ ।
ನವನಿಯೊಳೊಗೆದಂತೆ ಕಾಂತಿ ಮೆಱೆದಪುದಿಂದಿಂ ॥
ಶಿವರ್ಗಳ ಚೆಲ್ವಿಕೆ ಕಂಗಳ ।
ತವರಾಜಮನಿಂದು ಕಂಡೆನೀ ಬಾಲಕರಂ ॥ ೬೨

ಆವ ಕುಲಮಾರ ತನಯರ್ ।
ದಾವೆಡೆಯಿಂ ಬಂದಿರೇಕೆ ಬಾಲ್ಯದೊಳೀ ಭಿ ॥
ಕ್ಷಾವೃತ್ತಿಯೆಂದು ಬೆಸಗೊಳೆ ।
ಭೂವರ ಕೇಳೆಂದು ಕುವರನಂದಿಂತೆಂದಂ ॥ ೬೩

ಧರ್ಮಪರರ್ಗಲ್ಲದೆಮ್ಮಯು ।
ನಿರ್ಮಲಚಾರಿತ್ರಮಿಂಬುಗೆಯ್ಯದು ನಿಮಗಾ ॥
ಧರ್ಮದ ಪೋದಪೊಲಂ ತಾಂ ।
ನರ್ಮದೆಯಿಂ ಗೆಂಟದೇಕೆ ಕೇಳ್ದಪೆಯೆಮ್ಮಂ ॥ ೬೪

ಆ ಮಾತನ್ನೆಗಮಿರ್ಕೆಲೆ ।
ಭೂಮೀಶ್ವರ ನಿನಗೆ ಪಥ್ಯಮಾವುದದಂ ಮಾ ॥
ಡಾಮೂಲಚೂಲಮೆಮಗೆ ತ ।
ಳಾಮಳಕಂ ಭವನಿಬದ್ಧಮುಟಲಿಸಿತೆಮ್ಮಂ ॥ ೬೫

---

೬೩. ಹೀಗೆಂದು ಯೋಚಿಸಿ, ಆ ಮಾರಿದತ್ತರಾಜನು ಅವರನ್ನು ಕುರಿತು "ನೀವಾವಕುಲದವರು ? ಯಾರ ಮಕ್ಕಳು ? ಯಾವ ಸ್ಥಳದಿಂದ ಬರುತ್ತಿದ್ದಿರಿ ? ಎಳೆಯ ವಯಸ್ಸಿನಲ್ಲೇ ಈ ಭಿಕ್ಷಾವೃತ್ತಿ ಏಕೆ ?" ಎಂದು ಕೇಳಲು ಆ ರಾಜಕುಮಾರನು ಅವನಿಗೆ ಹೀಗೆಂದು ಹೇಳಿದನು.

೬೪-೬೬ "ಎಲೈ ರಾಜನೆ! ಧರ್ಮಮಾರ್ಗದಲ್ಲಿ ನಡೆಯುವವರಿಗಲ್ಲದೆ ನಮ್ಮ ಪರಿಶುದ್ಧವಾದ ನಡತೆಯು ನಿಮಗೆ ಹಿತವಾಗಿ ತೋರುವುದಿಲ್ಲ. ಫಲವತ್ತಾದ ಕ್ಷೇತ್ರಗಳು ನರ್ಮದಾನದಿಯಿಂದ ಬಹುದೂರದಲ್ಲಿವೆಯಲ್ಲವೆ? (ಅಂದರೆ ನರ್ಮದಾ ನದಿಯು ವಿಂಧ್ಯಪರ್ವತದ ತಪ್ಪಲಲ್ಲಿ ಕಲ್ಲುಗುಡ್ಡಗಳಲ್ಲೇ ಹರಿಯುವುದರಿಂದ ಫಲವತ್ತಾದ ಮೈದಾನಕ್ಕೆ ದೂರವಾಗಿರುವುದು ಎಂದು ಭಾವವು), ನಮ್ಮನ್ನೇಕೆ ಕೇಳುವೆ ? ಆ ಮಾತುಗಳು ಹಾಗಿರಲಿ. ಎಲೆ ರಾಜನೆ ! ನಿನಗಾವುದು ಹಿತವಾಗಿ ತೋರುವುದೋ ಅದನ್ನು ಮಾಡು. ನಮ್ಮ ಪೂರ್ವಜನ್ಮಗಳ ವಿಚಾರವು ಮೊದಲಿಂದ ಕೊನೆಯವರೆಗೂ ನಮಗೆ ಚೆನ್ನಾಗಿ ಗೊತ್ತಾಗಿದೆ. ನಮ್ಮ ಪೂರ್ವಭವದ ಪಾಪಕರ್ಮಗಳು ನಮ್ಮನ್ನು

ಗುಣಿಗಳ ಗುಣರತ್ನವಿಭೂ।
ಷಣಮೆಸೆವುದೆ ವಿಕಳಹೃದಯರಾದವರ್ಗೆ ನೃಪಾ॥
ಗ್ರಣಿ ಪೇಳ್ ತುಪ್ಪೇಱಿದ ದ।
ರ್ಪಣದೊಳ್ ಪಜ್ಜಳಿಸಲಾರ್ಪುದೇ ಪ್ರತಿಬಿಂಬಂ॥ ೬೬

ಇಂತೆಂಬುದುಮಾ ಕುವರನ।
ದಂತಪ್ರಭೆಯೆಂಬ ಶೀತಕರನುದಯಮಘ॥
ಧ್ವಾಂತೌಘಮಧುಪಮಾಲಿಕೆ।
ಯಂ ತೊಲಗಿಸೆ ಮುಗಿದುದವನ ಕರಸರಸಿರುಹಂ॥ ೬೭

ಧನಮಂ ಕಂಡ ದರಿದ್ರನ।
ಮನದವೊಲೆಱಗಿದುವು ಪರಿಜನಂಗಳ ನೊಸಲಾ॥
ವಿನಯನಿಧಿಗಾ ಕುಮಾರಕ।
ನನುರಾಗದೆ ಮಾರಿದತ್ತವಿಭುಗಿಂತೆಂದಂ॥ ೬೮

---

ಹೀಗೆ ಅಳಲಿಸುತ್ತಿವೆ. ಸದ್ಗುಣಶಾಲಿಗಳ ಗುಣವೆಂಬ ರತ್ನಗಳು ವಿಕಲ ಹೃದಯರಿಗೆ (ವಿಕಾರವಾದ ಚರಿತ್ರೆಯುಳ್ಳವರಿಗೆ) ಭೂಷಣವಾಗಲಾರವು ಜಿಡ್ಡಿನಿಂದ ಕೂಡಿದ ಕನ್ನಡಿಯಲ್ಲಿ ಪ್ರತಿಬಿಂಬವು ಎಂದಾದರೂ ಪ್ರಕಾಶ ಮಾನವಾಗಿ ಕಾಣುವುದೇ ?" ಎಂದುತ್ತರವಿತ್ತನು.

೬೭. ಹೀಗೆಂದು ಹೇಳುತ್ತಿರುವ ಆ ಕುಮಾರನ ಹಲ್ಲುಗಳ ಕಾಂತಿಯೆಂಬ ಚಂದ್ರೋದಯವು ಮಾರಿದತ್ತನ ಪಾಪವೆಂಬ ಕತ್ತಲೆಯ ಸಮೂಹದಂತಿದ್ದ ದುಂಬಿಗಳ ಸಾಲನ್ನು ಓಡಿಸಲು, ರಾಜನ ಕೈಗಳೆಂಬ ತಾವರೆಯು ಮುಚ್ಚಿ ಕೊಂಡಿತು. (ಚಂದ್ರೋದಯದಿಂದ ಕತ್ತಲೆಯು ಹೋಗುವುದು, ದುಂಬಿ ಗಳೆಲ್ಲವೂ ಮುಚ್ಚಿಕೊಳ್ಳುತ್ತಿರುವ ತಾವರೆಯಿಂದ ಹಾರಿಹೋಗುವುವು. ಈ ಸಾಮ್ಯವನ್ನು ರಾಜನು ತನ್ನ ಮನಸ್ಸಿನಲ್ಲಿದ್ದ ಅಜ್ಞಾನವನ್ನು ದೂರಮಾಡಿ ತನ್ನ ಕೈಗಳನ್ನು ಜೋಡಿಸಿ ನಮುಸ್ಕರಿಸಿದುದಕ್ಕೆ ಹೋಲಿಸಿದೆ.)

೬೮-೭೦ ರಾಜನು ಆ ಕುಮಾರರಿಗೆ ಕೈಮುಗಿದುದನ್ನು ನೋಡಿದ ಪರಿಜನ ರೆಲ್ಲರೂ ನಿಧಿಯನ್ನು ಕಂಡ ದರಿದ್ರನ ಮನಸ್ಸಿನಂತೆ ಅತಿಯಾದ ಸಂತೋಷ ದಿಂದ ಕೂಡಿದವರಾಗಿ ಅತ್ಯಂತ ವಿನಯಾನ್ವಿತನಾದ ಆ ಕುಮಾರನ ಕಾಲಿ ಗೆರಗಿದರು. ಆಗ ಆ ಅಭಯಕುಮಾರನು ಮಾರಿದತ್ತನನ್ನು ಕುರಿತು

ಭಲರೆ ನೃಪೇಂದ್ರಾ ದಯೆಯೊಳ್ ।
ನೆಲೆಗೊಳಿಸಿದೆ ಮನಮನಮಮ ನೀಂ ಕೇಳ್ದುದು ಸ ॥
ತ್ಫಲಮಾಯ್ತು ಧರ್ಮಪಥದೊಳ್ ।
ಸಲೆ ಸಂದಪೆ ಕಾಲಲಬ್ಧಿ ಪೊಲಗೆಡಿಸುವುದೇ ॥ ೬೯

ಎಂತು ಬೆಸಗೊಂಡೆ ಬೆಸಗೊಂ ।
ಡಂತಿರೆ ದತ್ತಾವಧಾನನಾಗು ಜಯಶ್ರೀ ॥
ಕಾಂತೆಯುಮಂ ಪರಮಶ್ರೀ ॥
ಕಾಂತೆಯುಮಂ ನಿನಗೆ ಕುಡುವುದೀ ಸತ್ಕಥನಂ ॥ ೭೦

॥ ಮಂದಾಕ್ರಾಂತ ॥

ಶ್ರೀಮತ್ತೀರ್ಥಾಧಿಪನ ವದನಾಂಭೋಜದಿಂ ಸರ್ವಭಾಷಾ ।
ಸಾಮಾನ್ಯಂ ಶ್ರೀವಚನವೊಗೆದತ್ತಾ ವಚೋಮಾರ್ಗದಿಂ ಮ ।
ತ್ತಾಮುಂ ಕಂಡುಂಡುದಱ ಕಥೆಯಂ ಪೇೞ್ದಪೆಂ ಕೇಳಿಮೆಂದಾ ।
ಭೂಮೀಶಂಗಂದಭಯರುಚಿಯಿಂತೆಂದು ಪೇೞಲ್ತಗುಳ್ದಂ ॥ ೭೧

---

" ಎಲೆ ರಾಜೇಂದ್ರ ಭಾಪು ! ನಿನ್ನ ಮನಸ್ಸನ್ನು ದಯೆಯಲ್ಲಿ ನಿಲ್ಲಿಸಿದೆ; ಆಶ್ಚರ್ಯ ! ನೀನು ನಮ್ಮನ್ನು ಕೇಳಿದುದಕ್ಕೆ ಒಳ್ಳೆಯ ಫಲವಾಯಿತು. ಇನ್ನು ಮುಂದೆ ಧರ್ಮಮಾರ್ಗದಲ್ಲಿ ನಡೆದು ಕೀರ್ತಿಯನ್ನು ಹೊಂದುವೆ ಕಾಲಲಬ್ಧಿಯೊದಗಿದರೆ ಅದು ಹಾಳುಮಾಡುವುದೇ ? ಹೇಗೆ ಕೇಳಿದೆಯೋ ಹಾಗೆಯೇ ಇನ್ನೂ ಮನಸ್ಸಿಟ್ಟು ಕೇಳು. ನಾನು ಹೇಳಲಿರುವ ಸತ್ಕಥೆಯು (ಧರ್ಮಕಥೆ) ನಿನಗೆ ಇಹದಲ್ಲಿ ವಿಜಯಲಕ್ಷ್ಮಿಯನ್ನೂ ಪರದಲ್ಲಿ ಮುಕ್ತಿ ಲಕ್ಷ್ಮಿಯನ್ನೂ ದೊರಕಿಸಿಕೊಡುವುದು " ಎಂದು ಹೇಳಿದನು.

೬೯. " ಓ ರಾಜನೇ ! ಪರಿಜನರೇ ! ಕೇಳಿ, ಶ್ರೀಮಂತನಾದ ವರ್ಧಮಾನ ತೀರ್ಥಂಕರರ ಮುಖಕಮಲದಿಂದ ಹೊರಟ ಸರ್ವಭಾಷಾಮಯವಾದ ದಿವ್ಯವಚನದಿಂದ ಬೋಧಿಸಲ್ಪಟ್ಟ ದಯಾಮೂಲವಾದ ಧರ್ಮಮಾರ್ಗವನ್ನನುಸರಿಸಿ ನಾವು ಅನುಭವಿಸಿ ತಿಳಿದಿರುವ ಕಥೆಯನ್ನು ಹೇಳುವೆನು ಕೇಳಿರಿ " ಎಂದು ಹೇಳಿ ಆ ಅಭಯರುಚಿಕುಮಾರನು ಮುಂದೆ ಹೇಳುವಂತೆ ಹೇಳಲುಪಕ್ರಮಿಸಿದನು.

॥ ಮಾ ಲಿ ನಿ ॥

ಅಭಯರುಚಿಕುಮಾರಂ ಮಾರಿದತ್ತಂಗೆ ಹಿಂಸಾ।
ರಭಸಮತಿಗೆ ಸಯ್ಪಂ ಪೇೞ್ದು ಧರ್ಮಕ್ಕೆ ತಂದೀ॥
ಶುಭಕಥನಮನತ್ಯಾನಂದದಿಂ ಕೇಳ್ವ ಭವ್ಯ।
ಪ್ರಭುಸಭೆಗೆಸೆದಿರ್ಕುಂ ಮಂಗಳಶ್ರೀವಿಲಾಸಂ॥ ೭೨

ಇದು ಜಿನಸಮಯಕುಮುದಿನೀಶರಚ್ಚಂದ್ರಚೈತ್ರಚಂದ್ರಮ
ಸದಮಲರಾಮಚಂದ್ರಮುನೀಂದ್ರಪದಭಕ್ತಂ ಜಾನಕಿ
ಮಾಡಿದ ಯಶೋಧರಚರಿತ್ರದೊಳುದಾರಂ
ಪ್ರಥಮಾವತಾರಂ

---

೭೨. ಅಭಯರುಚಿಕುಮಾರನು ಹಿಂಸಾಪರನಾಗಿದ್ದ ಮಾರಿದತ್ತನಿಗೆ ಪುಣ್ಯಕಥೆಯನ್ನು ಹೇಳಿ ಧರ್ಮಮಾರ್ಗಕ್ಕೆ ತಂದ ಈ ಶುಭಕಥನವನ್ನು ಸಂತೋಷದಿಂದ ಕೇಳುವ ಭವ್ಯರಾದ ರಾಜರಿಗೂ ಪ್ರಜೆಗಳಿಗೂ ಮಂಗಲವೂ ಸಂಪತ್ತೂ ಉಂಟಾಗುವುವು.

ಇದು ಜಿನಸಮಯ (ಮತ) ವೆಂಬ ಕನ್ನೈದಿಲೆಗೆ ಶರಚ್ಚಂದ್ರ ಚೈತ್ರಚಂದ್ರ
ನೆಂತಿರುವ ಪರಿಶುದ್ಧರಾದ ರಾಮಚಂದ್ರಮುನೀಂದ್ರಪದಭಕ್ತನಾದ
ಜಾನಕಿ (ಜನ್ನ) ಯು ರಚಿಸಿದ ಯಶೋಧರ ಚರಿ
ತ್ರೆ ಯಕರ್ಣಾಟಕಾನುವಾದದಲ್ಲಿ ಮೊದಲನೆಯ
ಅವತಾರವು.



ಶ್ರೀ

# ದ್ವಿತೀಯಾವತಾರಂ

|| ಕಂದ ||

ಆ ಕಥೆ ಮತ್ತೆಂತೆಂದೊಡೆ ।
ಭೂಕಾಂತೆಗವಂತಿವಿಷಯವಾಸ್ಯದವೊಲ್ ಶೋ ॥
ಭಾಕರಮಾಯ್ತದಱೊಳ್ ನಾ ।
ಸಾಕುಟ್ಮಳದಂತೆ ಮೆಱೆವುದುಜ್ಜಯಿನಿಪುರಂ ॥ ೧

ಆ ಪುರದರಸಂ ನತಭೂ ।
ಮೀಪಾಲಕಮಕುಟಮಸ್ತಕದೆ* ನಿಜತೇಜೋ ॥
ರೂಪಕಮೆ ಪದ್ಮರಾಗದ ।
ದೀಪದವೋಲ್ ಮೆಱೆವಿನಂ **ಯಶೌಘಂ** ಮೆಱೆವಂ ॥ ೨

ದೊರೆವಡೆದ ಯಶೌಘನ ಭೂ ।
ವರತಿಳಕನ ಕಣ್ಗಳಂಗರಕ್ಷರ್ ಮನವಾ ॥
ಭರಣಂ ರಾಜ್ಯಶ್ರೀ ಸಹ ।
ಚರಿಯನೆ ಸಂದತ್ತು ಚಂದ್ರಮತಿಗರಸಿತನಂ ॥ ೩

---

|| ತಾತ್ಪರ್ಯ ||

೧. ಆ ಕಥೆ ಎಂತೆಂದರೆ ಕೇಳು :—ಭೂಮಿಯೆಂಬ ಸ್ತ್ರೀಯ ಮುಖದಂತೆ ಅವಂತಿಯೆಂಬ ದೇಶವೂ, ಆ ಮುಖದಲ್ಲಿನ ಮೂಗಿನಂತೆ ಉಜ್ಜಯಿನಿಯೆಂಬ ಪುರವೂ ಶೋಭಾಯಮಾನವಾಗಿದ್ದುವು. (ದೇಹಕ್ಕೆ ಮುಖವು ಪ್ರಧಾನಾಂಗವು (ಅಂದವನ್ನು ಕೊಡುವುದು); ಮುಖದಲ್ಲಿ ಮೂಗು ಪ್ರಧಾನವಾದುದು, ಹಾಗೆ ದೇಶವೂ ನಗರವೂ ಶೋಭಿಸುತ್ತಿದ್ದುವು).

೨. ಆ ನಗರದರಸನಾದ **ಯಶೌಘನು** ತನ್ನ ಪಾದಗಳಲ್ಲಿ ಆನಮಿತರಾದ ರಾಜರುಗಳ ಕಿರೀಟದಿಂದ ಕೂಡಿದ ತಲೆಗಳ ಮೇಲೆ ಅವನ ತೇಜೋಮಯವಾದ ಮೂರ್ತಿಯು ಪದ್ಮರಾಗದ ದೀಪದಂತೆ ತೋರುವ ಹಾಗೆ ಶೋಭಿಸುತ್ತಿದ್ದನು. (ಅಥವಾ, ನತಭೂಮಿಪಾಲರ ತಲೆಯ ಮೇಲಿನ ಕಿರೀಟಗಳ ಕಾಂತಿಯು ರಾಜನ ಸುತ್ತಲೂ ಪದ್ಮರಾಗದ ದೀಪದಂತೆ ಮೆರೆಯುತ್ತಿದ್ದಿತು—ಎಂದಾದರೂ ಅರ್ಥಮಾಡಬಹುದು).

೩. ಆ ಪ್ರಸಿದ್ಧನಾದ ಯಶೌಘರಾಜಶ್ರೇಷ್ಠನ ಕಣ್ಣುಗಳೇ ಅಂಗರಕ್ಷ

*ಭೂಮೀಪಾಲರ ಮಕುಟಮಸ್ತಕದ—ಎಂದೂ ಪಾಠವಿದೆ.

ಭರದಿಂದವರ್ಗಳ ಬೇಂಟವು ।
ನಿರುಳಿಂದು ಪಗಲ್ ವಸಂತನಿರುಳಂ ಪಗಲುಂ ॥
ಸುರಭಿಶರನಂಗಜಾವಂ* ।
ಗರಟಿಗೆಮೆಯ್ಗಾಪು ವೆಱಿಯೆ ಬಿಡದೋಗಲಗಿಪರ್ ॥ ೪

ಅನಿತೆಸೆವ ಚಂದ್ರಮತಿಗಂ ।
ಜನಪತಿಗಂ ಪುಟ್ಟಿದಂ ಯಶೋಧರನೆಂಬಂ ॥
ಜನಮೋಹನಬಾಣಂ ಕ ।
ರ್ಬಿನಬಿಲ್ಗಂ ನನೆಯ ನಾರಿಗಂ ಪುಟ್ಟುವವೋಲ್ ॥ ೫

ನೋಡುವ ಕಣ್ಗಳ ಸಿರಿ ಮಾ ।
ತಾಡುವ ಬಾಯ್ಗಳ ರಸಾಯನಂ ಸಂತಸದಿಂ ॥
ಕೂಡುವ ತೋಳ್ಗಳ ಪುಣ್ಯಂ ।
ನಾಡಾಡಿಯೆ ರೂಪು ಕುವರವಿದ್ಯಾಧರನಾ ॥ ೬

---

ರಂತೆಯೂ, ಮನಸ್ಸೇ ಆಭರಣದಂತೆಯೂ, ರಾಜ್ಯಲಕ್ಷ್ಮಿಯು (ಸಂಪತ್ತಿ) ದಾದಿಯಂತೆಯೂ (ಸವತಿಯಂತೆಯೂ) ಇದ್ದು ಚಂದ್ರಮತಿಯೆಂಬವಳಿಗೆ ಅರಸಿತನವು ಮೆರೆಯುತ್ತಿದ್ದಿತು. (ಅರಸಿತನಕ್ಕೆ ಲಕ್ಷಣವಾದ ಅಂಗರಕ್ಷಕರು, ಆಭರಣಾದಿಗಳು, ಸಹಚರಿ ಈ ಮೂರೂ ಅರಸಿನಿಂದಲೇ ಒದಗಿದ್ದುದರಿಂದ ಅರಸಿತನವು ಸಾರ್ಥಕವಾಗಿತ್ತೆಂದು ಭಾವವು).

ಆ ರಾಜರಾಣಿಯರ ಪ್ರಣಯವನ್ನು ರಾತ್ರಿಯಲ್ಲಿ ಚಂದ್ರನೂ, ಹಗಲಿನಲ್ಲಿ ವಸಂತನೂ, ಹಗಲಿರುಳೆರಡರಲ್ಲಿಯೂ (ಸದಾ) ಮನ್ಮಥನೆಂಬ ಕಾವಲುಗಾರನೂ ಸರದಿಯಮೇಲೆ ಮೈಗಾವಲಿದ್ದಂತೆ ಅವರನ್ನು ಓಲಗಿಸುತ್ತಿದ್ದರು. (ರತಿಗೆ ಉದ್ದೀಪನಸಾಧಕಗಳಾದ ಚಂದ್ರಮನ್ಮಥರು ಆ ರಾಣಿಯನ್ನು ಸರ್ವದಾ ಆಶ್ರಯಿಸಿದ್ದರೆಂದು ಭಾವವು).

ಈ ರೀತಿಯಾಗಿ ಮೆರೆಯುತ್ತಿರುವ ಚಂದ್ರಮತಿಯುಶೌಘರಿಗೆ, ಮನ್ಮಥನ ಕಬ್ಬಿನಬಿಲ್ಲಿನ ಹೂವಿನಹಗ್ಗದಿಂದ ಹುಟ್ಟುವ ಜನಮೋಹನ ಬಾಣದಂತೆ ಯಶೋಧರನೆಂಬ ಮಗನು ಹುಟ್ಟಿದನು. (ಉಚಿತರತಿಯಿಂದ ವರ್ತಿಸುತ್ತಿದ್ದ ಅವರಿಬ್ಬರಿಗೆ ಹುಟ್ಟಿದ ಮಗನು ತುಂಬಾ ಸುಂದರನಾಗಿದ್ದನೆಂದು ಭಾವವು).

ನೋಡುವವರ ಕಣ್ಣಿಗೆ ಚರಿತಾರ್ಥತೆಯೂ, ಮಾತಾಡುವವರ

---

ಗಜಾವನೆಂದರೆ ಯಾವಾಗಲೂ ಕಾಯುತ್ತಿರುವ ಸೇವಕ.—ಹಾಸನದ ಶಾಸನ ೧೦೨.

ಎಳೆವೆಳ್ದಿಂಗಳ್ ನನೆಗಣೆ |
ಮಳಯಾನಿಳನಿಲ್ಲಿ ಮೂವಱೊಳಗಾರೊ ಕುತೂ ||
ಹಳಮಾದಪುದೆನ್ನದ ಕ |
ಣ್ಣೊಳವೆ ಯಶೋಧರಕುಮಾರನಂ ಕಾಣಲೊಡಂ || ೭

ಪರನೃಪರ ರಾಜ್ಯಲಕ್ಷ್ಮಿಯ |
ಕುರುಳಾಕರ್ಷಣದೆ ನೀಳ್ದ ತೋಳ್ ಮೆಱೆವುವು ಪೇ ||
ರುರದೋಳ್ ನೆಲೆಸಿದ ಲಕ್ಷ್ಮೀ |
ಕರಿಣಿಗೆ ಬಾಳಿಸಿದ ರನ್ನದಮಳ್ಗಂಬದವೋಲ್ || ೮

ಅಮೃತಮತಿ ಗಡ ಯಶೋಧರ |
ನ ಮನಃಪ್ರಿಯೆ ಆಕೆ ದೀವಮಾಗೆ ಪುಳಿಂದಂ ||
ಸುಮನೋಬಾಣಂ ತದ್ಭ್ರೂ |
ರಮಣನನೊಲಿವಂತೆ ಗೋರಿಗೊಳಿಸುತ್ತಿರ್ಕುಂ || ೯

---

ಬಾಯಿಗೆ ಅಮೃತವೂ, ಆಲಿಂಗಿಸುವ ತೋಳುಗಳಿಗೆ ಪುಣ್ಯಮೂರ್ತಿಯೂ ಆಗಿದ್ದ ಆ ಯಶೋಧರಕುಮಾರನ ರೂಪು ಸಾಮಾನ್ಯವಾದುದೇ ? (ಅಸಮಾನವಾಗಿದ್ದಿತೆಂದು ಭಾವವು).

೭. ಆ ಯಶೋಧರಕುಮಾರನನ್ನು ನೋಡಿದರೆ ಈತನು ಬೆಳ್ದಿಂಗಳೋ, ಮನ್ಮಥನೋ, ಮಲಯಾನಿಲನೋ ಎಂದು ಕುತೂಹಲವುಂಟಾಗುವುದೆಂದು ಹೇಳದ ಕಣ್ಣುಗಳಿದ್ದುವೇ? (ಜನರಿದ್ದರೇ?), ಇರಲಿಲ್ಲವೆಂದು ತಾತ್ಪರ್ಯವು. (ಎಂದರೆ ಆ ಕುಮಾರನು ಚಂದ್ರನಂತೆ ಆಹ್ಲಾದಕಾರಿಯೂ, ಮನ್ಮಥನಂತೆ ಸುಂದರನೂ, ಮಲಯಾನಿಲದಂತೆ ಸುಖಸ್ಪರ್ಶವುಳ್ಳವನೂ ಆಗಿದ್ದುದರಿಂದ ಎಲ್ಲರೂ ಅವನನ್ನು ಅತ್ಯಂತ ಕುತೂಹಲದಿಂದ ನೋಡುತ್ತಿದ್ದರೆಂದು ಭಾವವು).

ಶತ್ರುರಾಜರ ರಾಜ್ಯಲಕ್ಷ್ಮಿಯ ಕುರುಳನ್ನು ಹಿಡಿದೆಳೆಯಲು ನೀಡಿದಂತಿದ್ದ ಆ ಯಶೋಧರನ ತೋಳುಗಳು ಅವನ ಎದೆಯಲ್ಲಿ ನೆಲಸಿರುವ ರಾಜ್ಯಲಕ್ಷ್ಮಿಯೆಂಬ ಆನೆಯನ್ನು ಕಟ್ಟಲು ನೆಟ್ಟಿರುವ ಎರಡು ರತ್ನಕಂಬಗಳೋ ಎಂಬಂತೆ ಶೋಭಿಸುತ್ತಿದ್ದುವು. (ಎಂದರೆ ಆತನು ಭುಜಬಲದಿಂದ ಪರರಾಜರ ಸಂಪತ್ತನ್ನು ಎಳೆದುಕೊಂಡು ತನ್ನಲ್ಲಿ ನೆಲಸುವಂತೆ ಮಾಡಿದ್ದನು. ಮೊತ್ತದಲ್ಲಿ ಆ ರಾಜಕುಮಾರನು ಮಹಾಪರಾಕ್ರಮಿಯಾಗಿಯೂ ಇದ್ದನೆಂದು ಭಾವವು).

೯. ಆ ಯಶೋಧರಕುಮಾರನಿಗೆ ಅಮೃತಮತಿಯೆಂಬುವಳು ಮನಸ್ಸಿ

ಕವಚಹರನಾದ ತನಯನೊ |
ಳವನೀಭರವೆಂಬ ಕನಕಮಣಿಮಂಡನಭಾ ||
ರವನಿಟ್ಟಿಪಿ ನೀಡುಮೋಲಾ |
ಡುವನಂಗಜರಾಗಶರಧಿಯೊಳಗೆ ಯಶೌಘಂ || ೧೦

ಅಗುಟ್ಟಿಡಪುವ ಕಾಲದ ಗರ |
ಟಿಗೆವೋಲ್ ನೃಪಚಿತ್ತಚೋರನಂ ತೋಱುವ ದೀ ||
ವಿಗೆಯೆನೆ ಸಮ್ಮುಖಮಾಯ್ತೋ |
ಲಗದೊಳ್ ನಿರ್ದಿಷ್ಟಪಳಿತಚಿಕುರಂ ಮುಕುರಂ || ೧೧

---

ಗೊಪ್ಪುವ ಪಕ್ಷಿಯಾದಳು. ಅವಳನ್ನು ದೀಪಕಮೃಗವಾಗಿಮಾಡಿಕೊಂಡು ಮನ್ಮಥನೆಂಬ ಬೇಟೆಗಾರನು ಆ ರಾಜನನ್ನು ಹಿಡಿಯಲು ಆಕರ್ಷಿಸುತ್ತಿದ್ದನು. (ಅಮೃತಮತಿಯು ರಾಜನಿಗೆ ಅತ್ಯಂತಪ್ರಿಯಳಾಗಿದ್ದಳೆಂದು ಭಾವವು. ದೀವ ಎಂದರೆ ಬೇಟೆಗಾರರು ಪ್ರಾಣಿಗಳನ್ನು ಬಲೆಗೆ ಬೀಳುವಂತೆ ಮಾಡಲು ಉಪಯೋಗಿಸುವ ಮನೆಯಲ್ಲಿ ಪಳಗಿಸಿದ ಪ್ರಾಣಿಗಳು— ಮೃಗ ಪಕ್ಷಿ ಮುಂತಾದುವು).

೧೦. ಪ್ರಾಪ್ತಯೌವನನಾದ (ಯುವರಾಜನಾದ) ಪುತ್ರ ಯಶೋಧರನ ತಲೆಯಮೇಲೆ ರಾಜ್ಯಭಾರವೆಂಬ ರತ್ನಖಚಿತವಾದ ಕಿರೀಟವನ್ನಿರಿಸಿ ತಂದೆಯಾದ ಯಶೌಘರಾಜನು ಬಹುಕಾಲದವರೆಗೆ ಭೋಗೋಪಭೋಗ ಸಮುದ್ರದಲ್ಲಿ ಓಲಾಡುತ್ತಿದ್ದನು. (ರಾಜ್ಯಭಾರದ ತೊಂದರೆಯಿಲ್ಲದೆ ನಿಶ್ಚಿಂತನಾಗಿ ವಿಷಯಸುಖಮಗ್ನನಾಗಿ ಕಾಲಕಳೆಯುತ್ತಿದ್ದನೆಂದು ಭಾವವು).

೧೧. ಹ್ರಾಸವೃದ್ಧಿಗಳನ್ನುಂಟುಮಾಡುವ ಕಾಲದಸರದಿಯಂತೆ, ದೊರೆಯಾದ ಯಶೌಘನ ಮನಸ್ಸಿನಲ್ಲಿದ್ದ ಕಳ್ಳನನ್ನು ತೋರಿಸಿಕೊಡುವ ದೀಪದಂತೆ ನರೆಯಿಂದ ಕೂಡಿದ ಕುರುಳನ್ನು ತೋರಿಸುವ ಕನ್ನಡಿಯೊಂದು ಸಭೆಯಲ್ಲಿ ರಾಜನಿಗೆ ಎದುರಾಗಿದ್ದಿತು. (ಕಾಲಾನುಗುಣವಾಗಿ ವಸ್ತುವಿನಲ್ಲಿ ಉಂಟಾಗುವ ಪರ್ಯಾಯವು ಅನಿವಾರ್ಯ. ಹಾಗೆಯೇ ವೃದ್ಧನಾದ ರಾಜನಿಗೆ ನರೆಯುಂಟಾಯಿತು.—ಚಿತ್ತಚೋರನೆಂದು ಕವಿಯು ಹೇಳಿರುವುದು ಬಹಳ ಸ್ವಾರಸ್ಯವಾಗಿದೆ. ವೃದ್ಧನಾದವನು ತನ್ನ ಮುಪ್ಪಿಗೆ ಸಹಜವಾದ ಮನೋದೌರ್ಬಲ್ಯ ಶಕ್ತಿಹೀನತೆಗಳನ್ನು ಹೊರಕ್ಕೆ ತೋರಿಸದೆ ಮರೆಮಾಚಿಕೊಂಡಿರಬಹುದು. ನರೆಗೂದಲಾದರೋ ಆತನ ಗುಟ್ಟನ್ನು ರಟ್ಟುಮಾಡುವ

ನರೆಯೆಂಬ ಹೊಱಿಸು* ಮೊಗಮೆಂ |
ಬರಮನೆಯಂ ಪೊಕ್ಕೊಡಂಗನಾಲೋಕನಮೆಂ ||
ಬರಸೆಂತಿರ್ದಪನೆಂದಾ |
ನರನಾಥಂ ತೊಱೆದನಖಿಳವಿಷಯಾಮಿಷಮಂ || ೧೨

ಧರಣೀಭಾರಕ್ಕೆ ಯಶೋ |
ಧರನನೊಡಂಬಡಿಸಿ ನೂರ್ವರರಸುಗಳೊಡನಾ ||
ದರದಿಂ ಕಂಬಂದಪ್ಪಿದ |
ಕರಿಯಂತೆ ತಪೋವನಕ್ಕೆ ನಡೆದನಿಳೇಶಂ || ೧೩

ಧರಣೀಗಣಿಕೆ ಯಶೌಘನ |
ವಿರಹದ ಪರಿತಾಪಮಂ ಯಶೋಧರನ ಯಶೋ ||
ಹರಿಚಂದನಚರ್ಚೆಯಿನು |
ದ್ಧುರದಾನಾಸಾರಸೇಕದಿಂ ಮಗ್ಗಿಸಿದಳ್ || ೧೪

---

ಗುರುತು. ಆದ್ದರಿಂದ ನರೆಗೂದಲನ್ನು ಕಳ್ಳನನ್ನು ಕಂಡುಹಿಡಿಯುವ ದೀಪವೆಂದು ವರ್ಣಿಸಿದ್ದಾನೆ).

೧೨. ನರೆಗೂದಲೆಂಬ ಪಾರಿವಾಳವು ಮುಖವೆಂಬ ಅರಮನೆಯನ್ನು ಪ್ರವೇಶ ಮಾಡಿದುದರಿಂದ ಸ್ತ್ರೀದರ್ಶನವೆಂಬ ರಾಜನು ಹೇಗಿರಲಾಗುವುದೆಂಬಂತೆ ಮುದಿಯನಾದ ಯಶೌಘನ ಮನಸ್ಸಿನಿಂದ ಸಕಲವಿಷಯ ಸುಖೇಚ್ಛೆಯು ಹೊರಹೊರಟವು ಎಂದರೆ ಆತನು ವೈರಾಗ್ಯಪರನಾದನು ಎಂದು ಭಾವವು.

೧೩. ರಾಜ್ಯಭಾರವನ್ನು ವಹಿಸಿಕೊಳ್ಳುವುದಕ್ಕೆ ಯಶೋಧರನನ್ನು ಒಡಂಬಡಿಸಿ ಯಶೌಘರಾಜನು ನೂರುಮಂದಿ ಅರಸುಗಳೊಡನೆ ಕಂಬ ತಪ್ಪಿದ ಎಂದರೆ ಕಂಬದಲ್ಲಿ ತನ್ನನ್ನು ಬಿಗಿದಿರುವ ಬಂಧನ ತಪ್ಪಿದ ಆನೆಯು ಸ್ವೇಚ್ಛೆಯಾಗಿ ಹೋಗುವಂತೆ ತಪೋವನಕ್ಕೆ ಹೊರಟನು.

೧೪. ರಾಜ್ಯವೆಂಬ ವೇಶ್ಯೆಯು ಯಶೌಘನ ವಿಯೋಗದಿಂದುಂಟಾದ ವಿರಹತಾಪವನ್ನು ಯಶೋಧರನ ಯಶಸ್ಸೆಂಬ ಚಂದನಾನುಲೇಪದಿಂದಲೂ, ಅತಿಯಾಗಿ ದಾನಮಾಡುವಾಗ ಎರೆಯುವ ಜಲಧಾರೆಯಿಂದಲೂ ತಗ್ಗಿಸಿ ಶೈತ್ಯೋಪಚಾರವಡೆದುಕೊಂಡಳು.

---

* ಪಾರಿವಾಳವು ಅರಮನೆಯನ್ನು ಹೊಕ್ಕರೆ ರಾಜನು ಅರಮನೆಯನ್ನು ಬಿಡಬೇಕೆಂದೂ ಅದೊಂದು ಅಪಶಕುನವೆಂದೂ ಹೇಳಿದೆ. ಚಾ. ಲೋ. ೪-೪೩.

ಗುರುಬಿಟ್ಟ ರಾಜ್ಯಲಕ್ಷ್ಮಿಗೆ ।
ವರನಾದೈ ಕಷ್ಟಮೆಲೆ ಯಶೋಧರ ನಿನ್ನೊಳ್ ॥
ನೆರೆದಿರ್ಪುದಿಲ್ಲವೆಂಬಂ ।
ತಿರೆ ಪೋದಳ್ ಕೀರ್ತಿಕಾಂತೆ ದೆಸೆಯೆಂಟುವರಂ ॥ ೧೫

ಅಳುರ್ವ ನಿಜವಿಜಯತೇಜೋ ।
ಬಳದಿಂ ಪರನೃಪರ ಗಂಡಗಾಳಿಕೆಯನದೇಂ ॥
ಕಳೆದನೊ ನೃಪತಿ ವಸುಂಧರೆ ।
ಪೊಳೆಪಂ ತಳೆದೆಯ್ದೆ ರಾಗಮಂ ಬೀಱುವಿನಂ ॥ ೧೬

ಅಳವಡೆ ಭುಜದೊಳ್ ಮೃಗಮದ ।
ತಿಳಕದವೋಲ್ ಸಕಲಧರಣಿ ಯೌವನಭೂಷಾ ॥
ವಳಿಯನೆ ತಿರ್ದುವನಾ ನೃಪ ।
ಕುಳಶೇಖರನಮೃತಮತಿಯ ಮುಖದರ್ಪಣದೊಳ್ ॥ ೧೭

---

೧೫. "ಎಲೆ ಯಶೋಧರನೆ! ತಂದೆಯು ಬಿಟ್ಟ ರಾಜ್ಯಲಕ್ಷ್ಮಿಗೆ ಪತಿಯಾದ ನಿನ್ನಲ್ಲಿ ನಾನು ಸೇರಿರುವುದಿಲ್ಲ" ವೆಂದು ಹೇಳಿ ಅವನ ಯಶಸ್ಸೆಂಬ ಪತ್ನಿಯು ರಾಜ್ಯವನ್ನು ಬಿಟ್ಟು ದಿಕ್ಕುಗಳ ಕೊನೆಯರೆಗೆ ಹೋದಳು. (ಯಶೋಧರನ ಯಶಸ್ಸು ದಿಗಂತದವರೆಗೂ ವ್ಯಾಪಿಸಿತ್ತೆಂದು ಭಾವವು).

೧೬. ಅತಿಯಾಗಿ ವ್ಯಾಪಿಸಿ ವೃದ್ಧಿಹೊಂದುತ್ತಿರುವ ತನ್ನ ಪರಾಕ್ರಮದ ತೇಜಸ್ಸಿನಿಂದ, ಭೂಮಿಯು ಕಳೆಯನ್ನು ಹೊಂದಿ ಅತಿಯಾಗಿ ಅನುರಾಗವನ್ನು ಬೀರುವಂತೆ ಮಾಡಿ ಶತ್ರುರಾಜರ ಪರಾಕ್ರಮವನ್ನು ತಗ್ಗಿಸಿದನು. (ಈತನಿಂದ ಪರಾಜಿತರಾದ ಹಗೆಯರಸರ ರಾಜ್ಯಲಕ್ಷ್ಮಿಯು ಈತನಲ್ಲಿ ಅನುರಾಗವುಳ್ಳವಳಾಗಿದ್ದಳೆಂದು ಭಾವವು).

೧೭. ಸಕಲಭೂಮಂಡಲರಕ್ಷಣಭಾರವನ್ನು ಭುಜದಲ್ಲಿ ಕಸ್ತೂರಿಯಲೇಪನದಷ್ಟು ಸುಲಭವಾಗಿ ಧರಿಸಿರುವ ಆ ರಾಜಕುಲತಿಲಕನಾದ ಯಶೋಧರನು ತನ್ನ ಯೌವನದ ಅಲಂಕಾರಗಳನ್ನು (ಸಕಲಸುಖಗಳನ್ನೂ) ರಾಣಿಯಾದ ಅಮೃತಮತಿಯ ಮುಖವೆಂಬ ಕನ್ನಡಿಯಲ್ಲಿ ತಿದ್ದಿಕೊಳ್ಳುತ್ತಿದ್ದನು (ಅಮೃತಮತಿಯೊಡನೆ ಸಮಸ್ತಸುಖಗಳನ್ನೂ ಯಥೇಷ್ಟವಾಗಿ ಅನುಭವಿಸುತ್ತಿದ್ದನೆಂದು ಭಾವವು).

ಅವನಿಪನೊರ್ಮೆ ಸಭಾಮಣಿ |
ಭವನದಿನಂಬರತರಂಗಿಣೀಪುಳಿನಮನೇ ||
ಱುವ ಹಂಸನಂತೆ ಶಯ್ಯಾ |
ಧವಳಪ್ರಾಸಾದತಳಮನೇಱಿದನರಸಂ || ೧೮

ಪರಿಮಳದ ತೂಂಬನೆತ್ತಿದ |
ನರಲಂಬಂ ಜನಮನೋವನಕ್ಕೆನೆ ಕಾಳಾ ||
ಗರುಧೂಮಲತಿಕೆ ಜಾಲಾಂ |
ದರದಿಂದೊಗೆದುದು ಕಪೋತಪಕ್ಷಚ್ಛುರಿತಂ || ೧೯

ಎಳದುಂಬಿ ಸುೞಿದು ಸುಟ್ಟುೞಿ |
ಗೊಳಿಸಿದ ಕುತ್ತುರಿಯ ಕಪ್ಪುರಂಗಳ ರಜಮು ||
ಚ್ಚಳಿಸಿದುವು ನೀಲಮುತ್ತಿನ |
ಬೆಳಗಿನ ಕುಡಿ ರಾಗರಸದಿನಂಕುರಿಸಿದವೋಲ್ || ೨೦

ಅಮೃತಮತಿಸಹಿತಮಾ ಚಂ |
ದ್ರಮತಿಯ ಸುತನೆಯ್ದಿ ಮೆಱೆವ ದವಳಾರದೊಳ ||
ಭ್ರಮತಂಗಮಭ್ರಿಸಹ ವಿ |
ಭ್ರಮದಿಂದಂ ಸೆಜ್ಜರಕ್ಕೆ ಬಂದವೊಲೆಸಗುಂ || ೨೧

---

೧೮. ಆ ಯಶೋಧರರಾಜನು ಒಂದಾನೊಂದುದಿನ ತನ್ನ ಸಭೆಯಿಂದೆದ್ದು ದೇವಗಂಗೆಯ ತಡಿಯ ಮರಳುದಿಣ್ಣೆಯನ್ನು ಹತ್ತುವ ಹಂಸಪಕ್ಷಿಯಂತೆ ತನ್ನ ಶಯ್ಯಾತಳವಿರುವ ಉಪ್ಪರಿಗೆಯನ್ನು ಹತ್ತಿಹೋದನು.

೧೯. ಓ ಮಾರಿದತ್ತರಾಜನೆ! ಮುಂದೆ ನಡೆದುದನ್ನು ಕೇಳು; ಮನ್ಮಥನು ಜನರ ಮನಸ್ಸೆಂಬ ತೋಟಕ್ಕೆ ಪರಿಮಳವೆಂಬ ನೀರನ್ನು ಹಾಯಿಸುವುದಕ್ಕಾಗಿ ಪರಿಮಳವೆಂಬ ಕೆರೆಯ ತೂಬನ್ನು ಎತ್ತಿದನೋ ಎನ್ನುವಹಾಗೆ ಆ ಯಶೋಧರನ ಶಯ್ಯಾಮಂದಿರದ ಕಿಟಕಿಯಿಂದ ಪಾರಿವಾಳದಹಕ್ಕಿಯ ರೆಕ್ಕೆಯ ಬಣ್ಣದಂತೆ ಬೂದಿಬಣ್ಣವುಳ್ಳ ಕಾಳಾಗರುಧೂಪದ ಹೊಗೆಯು ಲತೆಯಂತೆ ಹೊರಕ್ಕೆಬಂದಿತು.

೨೦. ವಾಸನೆಯ ಸವಿಗೆ ಅಲ್ಲಿಬಂದು ಹಾರಾಡುತ್ತಿರುವ ಎಳೆದುಂಬಿಗಳ ಹಾರಾಟದಿಂದ ಮೇಲಕ್ಕೇಳಿಸಲ್ಪಟ್ಟ ಆ ಶಯ್ಯಾಗೃಹದಲ್ಲಿ ಚೆಲ್ಲಿದ್ದ ಕಸ್ತೂರಿಯ ಮತ್ತು ಕರ್ಪೂರದ ಧೂಳಿಗಳು ನೀಲ ಮತ್ತು ಮುತ್ತಿನ ಲತೆಯ ಕುಡಿಗಳು ಶಯ್ಯಾಗೃಹದ ರಾಗರಸದಿಂದ ಅಂಕುರಿಸಿದುವೋ ಎಂಬಂತೆ ತೋರುತ್ತಿದ್ದಿತು.

೨೧. ಆ ಯಶೋಧರನು ತನ್ನ ರಾಣಿಯಾದ ಅಮೃತಮತಿಯೊಡನೆ

ವರಮುಂಚಮಣಿದ್ಯುತಿಧೃತ |
ಮರಾಳಿಕಾತೂಳತಳ್ಪದೊಳ್ ತಾಮೆಸೆದರ್ ||
ಸುರಚಾಪಚ್ಛವಿ ಸುತ್ತಿದ |
ಶರದಭ್ರದೊಳೆಸೆವ ಖಚರದಂಪತಿಗಳವೋಲ್ || ೨೨

ನಡೆಸೋಂಕಿದ ಕಡೆಗಣ್ಣ ಳ |
ಕುಡಿವೆಳಗಿಂ ಬಿಡುವ ಬೆಮರೊಳಂ ಪದದೊಳವರ್ಗಂ ||
ತಡವಾದರೊ ಕೌಮುದಿ ಕ |
ಣ್ಣಿಡೆ ಕರಗುವ ಚಂದ್ರಕಾಂತಮಣಿಪುತ್ರಿಕೆವೋಲ || ೨೩

ತನುಸೋಂಕಾಲಿಂಗನಚುಂ |
ಬನಮುಂ ಗಳರವದ ಸವಿ ರತಿಪ್ರೌಢಿಯಿನಾ ||
ತನುವಂ ನುಱಿಯಿಸೆಯಱಿಯದೆ |
ಮನೋಜನಾಡಿಸುವ ಜಂತ್ರದಂತಿರೆ ನೆರೆದರ್ || ೨೪

---

ಅಂತಃಪುರಕ್ಕೆ (ಶಯ್ಯಾಗೃಹಕ್ಕೆ) ಬಂದುದು ಇಂದ್ರನ ಐರಾವತವು ತನ್ನ ಹೆಣ್ಣಾನೆಯೊಡನೆ ತಮ್ಮ ಶಯ್ಯಾಸ್ಥಳಕ್ಕೆ ಬರುತ್ತಿರುವಂತೆ ಶೋಭಿಸಿತು.

೨೨. ನವರತ್ನಗಳ ಕಾಂತಿಯನ್ನು ಹೊಂದಿರುವ ಹಂಸತೂಲಿಕಾತಲ್ಪದಲ್ಲಿ ಆ ಯಶೋಧರಅನ್ರೃತಮತಿಯರು ಇಂದ್ರಧನುಸ್ಸಿನ ಕಾಂತಿಯಿಂದ ಸುತ್ತಲ್ಪಟ್ಟ ಶರತ್ಕಾಲದ ಮೇಘಗಳ ಮಧ್ಯದಲ್ಲಿ ವಿಹರಿಸುತ್ತಿರುವ ಖೇಚರ ಸತಿಪತಿಯರಂತೆ ಪ್ರಕಾಶಿಸಿದರು-

೨೩. ನಾಟುವಂತೆ ಬೀರಿದ ಕಡೆಗಣ್ಣುಗಳ ಕಾಂತಿಯೆಂಬ ಬೆಳದಿಂಗಳಿಂದಲೂ, ರತಿಶ್ರಮದಿಂದುಂಟಾದ ಬೆಮರಿನಿಂದಲೂ ಕೂಡಿ ರಮಿಸುತ್ತಿದ್ದ ಆ ದಂಪತಿಗಳು ಚಂದ್ರಬಿಂಬದ ಕಾಂತಿ ಬಿದ್ದೊಡನೆಯೇ ಕರಗುವ ಚಂದ್ರಕಾಂತ ಶಿಲೆಯಿಂದ ಮಾಡಿದ ಮೂರ್ತಿಗಳ ಹೋಲಿಕೆಯನ್ನು ಹೊಂದಿ ಸುರತಕ್ರೀಡೆಯಲ್ಲಿ ಅತಿಯಾಗಿ ಪರಿಶ್ರಮಿಸಿದರು.

೨೪. ಆಲಿಂಗನ ಚುಂಬನ ಗಳರವ ಮೊದಲಾದವುಗಳಿಂದ ಕೂಡಿದ ಆ ದಂಪತಿಗಳ ಸುರತಪ್ರೌಢಿಮೆಯು ದೇಹಗಳನ್ನೇ ಮರೆಯಿಸಲು (ಸುರತಲೀನರಾಗಿ ಮೈಮರೆತು) ಮನ್ಮಥನಾಡಿಸುವ ಯಂತ್ರದ ಬೊಂಬೆಗಳಂತೆ ರಮಿಸಿದರು.

ಸುರತಸುಖಪಾರವಶ್ಯಂ।
ತರೆ ನಿದ್ರಾಭರಮನಿರ್ವರುಂ ಶಿಥಿಳತನೂ॥
ಪರಿರಂಭಣಮುಚ್ಚಟಿಯದೆ।
ಪರಿವಲ್ಲಿತಬಾಹುವಳಯದೊಳ್ ಕಣ್ಗೆಯ್ದರ್॥ ೫೫

ಪುರ್ವೆಂಬ ಜವಳಿಗಟ್ಟಿನ।
ಕರ್ವಿನ ಬಿಲ್ಗಳ್ಗೆ ಬಿಗಿದ ಮಧುಕರಮಾಲಾ॥
ಮೌರ್ವಿಯೆನೆ ಮುಗಿದ ಕಣ್ಗಳ।
ಪರ್ವುಗೆಯೊಳ್ ಮೆಱೆದುದವರ ತಳ್ತಿಮೆದುಱುಗಳ್॥ ೫೬

ಹೃದಯಪ್ರಿಯರಂತೊರಗಿದ।
ಪದದೊಳಗ್ಗಟಿಗೆಯ ಜಾವದುಕ್ಕಡದುಲಿ ಮ॥
ಗ್ಗಿದ ಪೊತ್ತು ಸೂಳ್ಗೆ ಕರುಮಾ।
ಡದ ಪಕ್ಕದೊಳಿರ್ದ ಪಟ್ಟದಾನೆಯ ಬದಗಂ॥ ೫೭

---

೫೫. ಸುರತಸುಖಪರವಶತೆಯಿಂದುಟಾದ ನಿದ್ರಾವಶತೆಯನ್ನು ಶಿಥಿಲ ತನುಗಳಾದ ಅವರು (ಆ ದಂಪತಿಗಳು) ಆಲಿಂಗನದಿಂದ ಬಿಡುಗಡೆ ಹೊಂದದೆ ಮೈಮರೆತು ಮಲಗಿದ್ದರು.

೫೬. ಸುರತಪರಿಶ್ರಮದಿಂದ ಅರ್ಧಮುಚ್ಚಿದ ಅವರ ಕಣ್ಣುಗಳ ದಟ್ಟವಾಗಿ ಬೆಳೆದಿದ್ದ ರೆಪ್ಪೆಯ ಕೂದಲುಗಳು ಅವರ ಹುಬ್ಬುಗಳೆಂಬ ಎರಡು ಕಟ್ಟುಳ್ಳ ಕಬ್ಬಿನ ಬಿಲ್ಲುಗಳಿಗೆ ಕಟ್ಟಿದ್ದ ದುಂಬಿಗಳ ಸಾಲೆಂಬ ಬಿಲ್ಲಿನ ಹಗ್ಗದಂತೆ ಶೋಭಿಸುತ್ತಿದ್ದುವು.

೫೭-೫೮. ಹೃದಯಪ್ರಿಯರಾದ ಆ ದಂಪತಿಗಳು (ಯಶೋಧರ ಅಮೃತಮತಿಯರು) ಹಾಗೆ ಮೈಮರೆತು ಮಲಗಿದ್ದಾಗ, ಜಾವಜಾವದ ಸರದಿಯಲ್ಲಿ ಗಸ್ತುತಿರುಗುವ ಉಕ್ಕಡದಲ್ಲಿ ಧ್ವನಿಯು ಕಮ್ಮಿಯಾದ ಹೊತ್ತಿನಲ್ಲಿ (೩ನೆಯ ಜಾವದಲ್ಲಿ) ಅಂತಃಪುರದ ಸಮೀಪದಲ್ಲಿದ್ದ ಆನೆಯ ಲಾಯದಲ್ಲಿ ಪಟ್ಟದಾನೆಯ ಮಾವತಿಗನೊಬ್ಬನು ವಿನೋದಾರ್ಥವಾಗಿ ತನಗೆತಾನೆ ಹಾಡಿಕೊಳ್ಳುತ್ತಿದ್ದ ಇನಿದಾದ ಧ್ವನಿಯು ರಾಣಿಯ ನಿದ್ರೆಯನ್ನು ಚಿಲ್ಲದ ಬೀಜವು ನೀರನ್ನು ತಿಳಿಮಾಡುವಂತೆ ತಿಳಿಯಿಸಿ (ನಿದ್ರೆಯನ್ನು ಹೋಗಲಾಡಿಸಿ) ಆ ಮೃಗಲೋಚನೆಯ ಮನವನ್ನು ಸೂರೆಗೊಳ್ಳಲು ಆಕೆಯು ತನ್ನ ಮನಸ್ಸನ್ನೇ ಆ ಸಂಗೀತಗಾರನಿಗೆ ಒಪ್ಪಿಸಿಕೊಟ್ಟಳು. (ಗಾನ ಮೋಹಿತವಾದ ಮನಸ್ಸನ್ನು ಹಿಂದಿರುಗಿಸಲಾರದೆ ಅವನಿಗೇ ಒಪ್ಪಿಸಿಬಿಟ್ಟಳು ಎಂದರೆ ಸಂಪೂರ್ಣವಾಗಿ ಅವನನ್ನು ಪ್ರೀತಿಸಿದಳು)

ಬಿನದಕೆ ಪಾಡುತ್ತಿರೆ ನು।
ಣ್ದನಿ ನಿದ್ರೆಗೆ ಕತಕಬೀಜಮಾಯ್ತೆನೆ ಮೃಗಲೋ॥
ಚನೆ ತಿಳಿದಾಲಿಸಿ ಮುಟ್ಟಿದ।
ಮನಮನೆ ತೊಟ್ಟನೆ ಪಸಾಯದಾನಂಗೊಟ್ಟಳ್ ॥ ೨೮

ಗಹಗಹಿಕೆವಡೆದ ವಹಣಿಯ।
ಸಹಾಹೆ ಝುಂಪೆಯುದೊಳಮರೆ ಠಾಯದೊಳಂ ನಿ॥
ರ್ವಹಿಸಿ ನೆಲೆಗೊಳಿಸಿ ಬಯ್ಸಿಕೆ।
ಮಹಚಾಳಿಯದಲ್ಲಿ ಮೂರ್ತಿವಡೆದುದು ರಾಗಂ॥ [ಶಬ್ದಾನ್ವಯಾರ್ಥ] ೨೯

ಮಾಳಿಗೆಯೊಳಗಣ ಸೊಡರ್ಗುಡಿ।
ದಾಳಂಬಡೆದಂತೆ ರಂಗರಕ್ತಿಯೊಳಮರ್ದುಂ॥
ಪಾಳಿಕೆವಡೆದು ಬಜಾವಣೆ।
ಮಾಳವಸಿರಿಯೆಂಬ ರಾಗಮಂ ಚಾಳಿಸಿದಂ॥ ೩೦

ತಾಳದ ಲಯಮಂ ನೆನೆಯದೆ।
ಕೇಳಲೊಡಂ ಠಾಯೆ ಜಾತಿಯೊಳ್ ಗ್ರಾಮಯುತಂ॥
ಕೇಳಲೊಡಂ ಗೀತಮನೆಂ।
ದಾಳತಿಯೊಳ್ ಮೆಱೆದು ಪಾಡಿದಂ ರೂಪಕಮಂ॥ ೩೧

ಅಂತೆಸೆದು ಪಾಡುತಿರೆ ತ।
ದ್ದಂತಿಪನತಿನೂತ್ನಗೀತಪಾತನವಿಕಲ॥
ಸ್ವಾಂತೆಗೆ ನೋಡುವ ಕೂಡುವ।
ಚಿಂತೆ ಕಡಲ್ವರಿದುದಂದು ಬೆಳಗಪ್ಪಿನೆಗಂ॥ ೩೨

---

೨೯-೩೧. ಆ ಮಾವುತನು ತಾಳಬದ್ಧವಾಗಿಯೂ, ಸುಸ್ಥಾಯಿವುಳ್ಳದ್ದಾಗಿಯೂ, ಮಧುರವಾದ ಧ್ವನಿಯಿಂದ ಕೂಡಿದುದಾಗಿಯೂ ಇದ್ದ ಬೇರೆ ಬೇರೆ ರಾಗಗಳಲ್ಲಿ ಕೇಳುವವರ ಮನಸ್ಸನ್ನು ಸಂಪೂರ್ಣವಾಗಿ ಆಕರ್ಷಿಸುವಂತಹ ರೀತಿಯಲ್ಲಿ ಅನೇಕ ಗೀತಗಳನ್ನು ಹಾಡಿ ಮಾಳವಸಿರಿಯೆಂಬ ರಾಗವನ್ನು ಹಾಡಿದನು. ಆ ಗೀತದ ರಾಗವು ಗಹಗಹಿಕೆವಡೆದಿದ್ದ ವಹಣಿಯನ್ನು ಸಹಾಹೆಝುಂಪೆಯಲ್ಲಿ ಕೂಡಿ ಒಳ್ಳೆಯ ಸ್ಥಾಯಿಯಲ್ಲಿ ನಿರ್ವಹಿಸಿನಿಂತು ಬಯ್ಸಿಕೆ ಮಹಚಾಳಿಯದಲ್ಲಿ ಆಕಾರವನ್ನು ಪಡೆದಂತೆ ಇಂಪಾಗಿದ್ದಿತು. (ಶಬ್ದಾನ್ವಯಾರ್ಥಾಲಂಕಾರ)

೩೨. ಹಾಗೆ ಮನೋಹರವಾಗಿ ಹಾಡುತ್ತಿದ್ದ ಆ ಮಾವುತನ ಗಾನಕ್ಕೆ

ಮನದನ್ನಳಪ್ಪ ಕೆಳದಿಗೆ ।
ಮನಮಂ ಮುಂದಿಟ್ಟು ಬೞಿಕ ಕಳಿಪಿದೊಡವಳಾ
ತನ ರೂಪುಗಂಡು ಕಣ್ಗಂ ।
ಮನಕ್ಕಮುದ್ಗಾರವೆತ್ತು ಭೋಂಕನೆ ಮಗುಳ್ದಳ್ ॥ ೩೩

ಅಮೃತಮತಿಯೆತ್ತ ರೂಪಾ ।
ಧಮನಷ್ಟಾವಂಕನೆತ್ತ * " ಚಿತ್ರಮಪಾತ್ರೇ ॥
ರಮತೇ ನಾರೀ " ಯೆಂಬುದು ।
ಸಮನಿಸಿದುದು ಬೆಂದ ಬಿದಿಗೆ ಕಣ್ಣಿಲ್ಲಕ್ಕುಂ ॥ ೩೪

ಎನುತುಂ ಬಂದು ವಿಷಣ್ಣಾ ।
ನನೆಯಂ ಮಾರ್ಗಾವಲಗ್ನನೇತ್ರೆಯನುಚ್ಚಾಭ್ವ ॥
ಸನಿತಪ್ತಾಧರರುಚಿಯಂ ।
ಮನುಜೇಂದ್ರಾಂಗನೆಯನೆಯ್ದಿ ಕಂಡಿಂತೆಂದಳ್ ॥ ೩೫

---

ಮೋಹಿಸಿ ವಿಕಾರವನ್ನು ಹೊಂದಿದ್ದ ಆ ರಾಣಿಯ ಮನಸ್ಸಿನಲ್ಲಿ--ಆ ಸಂಗೀತಗಾರನನ್ನು ನೋಡಿ ಅವನೊಡನೆ ಕೂಡುವ ಚಿಂತೆಯು ಬೆಳಗಾಗುವವರೆಗೂ ಅವಿಚ್ಛಿನ್ನವಾಗಿ ಅಪಾರವಾಗಿ ಬೆಳೆಯಿತು.

೩೩. ಬೆಳಗಾದೊಡನೆಯೇ ಆ ಅಮೃತಮತಿಯು ತನ್ನ ಆಪ್ತಸಖಿ ಯೊಬ್ಬಳಿಗೆ (ಅವಳ ಹೆಸರು ಗುಣವತಿಯೆಂದು ಬೇರೆ ಗ್ರಂಥಗಳಲ್ಲಿ ಹೇಳಿದೆ) ತನ್ನ ಮನಸ್ಸಿನಲ್ಲಿರುವುದನ್ನೆಲ್ಲಾ ತಿಳಿಸಿ ಆ ಸಂಗೀತಗಾರನಲ್ಲಿಗೆ ಸಂಧಾನಕ್ಕೆ ಕಳುಹಿಸಲು, ಆ ಸಖಿಯು ಅಲ್ಲಿಗೆ ಹೋಗಿ ಆತನ (ಆ ಮಾವುತನ) ರೂಪನ್ನು ನೋಡಿ ಮನಸ್ಸಿಗೂ ಕಣ್ಣಿಗೂ ವಾಂತಿಯಾಗುವಂತೆ ಅಸಹ್ಯಕರ ವಾಗಿದ್ದುದನ್ನು ಕಂಡು ತತ್ಕ್ಷಣದಲ್ಲೇ ಹಿಂತಿರುಗಿ ಬಂದಳು.

೩೪. " ಲೋಕೈಕಸುಂದರಿಯಾದ ಅಮೃತಮತಿಯೆಲ್ಲಿ ? ಅತ್ಯಂತಕುರೂಪಿ ಯಾದ ಅಷ್ಟಾವಂಕನೆಲ್ಲಿ ? ಅವಳು ಅವನನ್ನು ಮೋಹಿಸಿರುವುದೆಂತು ? ಹೆಂಗಸು ಅಪಾತ್ರದಲ್ಲಿ ಪ್ರೀತಿಯನ್ನಿಡುವಳೆಂಬ ನಾಣ್ನುಡಿಯು ಇಲ್ಲಿ ನಿಜ ವಾಯ್ತು. ಈ ರೀತಿಯಾದ ಪ್ರಣಯವನ್ನುಂಟುಮಾಡಿದ ಆ ಹಾಳು ವಿಧಿಗೆ (ಅದೃಷ್ಟ) ಕಣ್ಣಿಲ್ಲವೆಂದು ತೋರುತ್ತದೆ " ಎಂದು ಹೇಳಿಕೊಳ್ಳುತ್ತ,

೩೫. ಹಿಂತಿರುಗಿಬಂದು, ತಾನು ಪ್ರೀತಿಸಿದ ನಲ್ಲನು ತನ್ನನ್ನು ಪ್ರೀತಿಸು

---

* ಲಕ್ಷ್ಮೀ ಲಕ್ಷಣಹಿನೇಚ ಕುಲಹೀನೇ ಸರಸ್ವತೀ ।
ಅಪಾತೇ ರಮತ್ರೇ ನಾರೀ ಗಿರೌ ವರ್ಷತಿ ವಾಸವಃ॥

ಬೃಹತ್ಕಥಾಮಂಜರಿ.

ಕಂತುವಿನ ಕೆಯ್ಯ ಕೂರಸಿ |
ಯಂತಿರೆ ಗರಗರಿಕೆವಡೆದು ಪೊಳೆವಸಿಯಳೆ ನೀ ||
ನಿಂತಪ್ಪ ಕಾಮದೇವಂ |
ಗೆಂತೆಂತಾಯ್ಪರಸಿ ಕೂರ್ತೆಯೆಂದಾನಱಿಯೆಂ || ೩೬

ಈದೊರೆಯನೆಂತು ತೋಱಲ್ |
ಮೇದಿನಿಯೊಳಗಾತನಲ್ಲದಿಲ್ಲೆನೆ ಪೇೞ್ವೇೞ್ ||
ಕಾದಲನಂತಿರೆ ಚೆಲ್ವನೆ |
ಮೂದವಿ ನೀನೆನ್ನ ಕೊಂದೆಯೆಂದೊಡೆ ಪೇೞ್ದಳ್ || ೩೭

ಪಱಿದಲೆ ಕುಟಿನೊಸಲ್ಗ |
ಣ್ಣೊಱೆವಾಯ್ ಹಪ್ಪಳಿಕೆಮೂಗು ಮುರುಟಿದ ಕಿವಿ ಬಿ ||
ಬ್ಬಿಱಿವಲ್ಕುಸಿಗೊರಲಿಟ್ಟದೆರ್ದೆ |
ಪೊರಂಟ ಬೆರ್ ಬಾತ ಬಸುಱಡಂಗಿದ ಜಘನಂ || ೩೮

---

ವನೋ ಇಲ್ಲವೋ ಎಂದು ಅತ್ಯಂತವಿಷಾದದಿಂದ ಕೂಡಿದ ಮುಖವುಳ್ಳ ವಳೂ ದಾದಿಯು ಹಿಂತಿರುಗಿಬರುವ ದಾರಿಯನ್ನೇ ಕಾಯುತ್ತಿರುವವಳೂ (ಎದುರುನೋಡುತ್ತಿರುವವಳು), ಹೃದಯೋದ್ವೇಗದಿಂದುಷ್ಣವಾದ ನಿಶ್ವಾಸ ದಿಂದ ಬೆಂದ ತುಟಿಯುಳ್ಳವಳೂ ಆಗಿದ್ದ ರಾಣಿಯನ್ನು ನೋಡಿ ಹೀಗೆಂದು ಹೇಳಿದಳು.

೩೬-೩೭. ಮನ್ಮಥನ ಕೈಯಕತ್ತಿಯಂತೆ ಮನೋಹರವಾಗಿ ಹೊಳೆಯುವ ತೆಳು ವಾದ ಮೈಯುಳ್ಳ ಕೋಮಲೆಯೆ ! ನೀನು ಇಂತಹ ಮನ್ಮಥನನ್ನು ಎಲ್ಲೆಲ್ಲಿ ಹುಡುಕಿ ಆರಿಸಿ ಮೋಹಿಸಿದೆ? ನನಗಂತೂ ತಿಳಿಯದು. ಅವನಿಗೆ ಸಮಾನ ನಾಗಿರುವವನನ್ನು ನಿನಗೆ ತೋರಿಸಲು ಭೂಮಿಯಲ್ಲೆಲ್ಲಾ ಆತನಲ್ಲದೆ ಬೇರೆ ಯವರಿಲ್ಲ ಎಂದು ವ್ಯಂಗ್ಯೋಕ್ತಿಯಿಂದ ಹೇಳಲು ರಾಣಿಯು "ಎಲೆ ಸಖಿ ! ಹೇಳು ನನ್ನ ಪತಿಯಂತೆ ಅವನೂ ಸುಂದರನೇ ? ಹೇಳು ; ಹೇಳಲು ತಡ ಮಾಡುತ್ತಾ ನನ್ನನ್ನು ಕೊಲ್ಲುತ್ತಿರುವೆ" ಎಂದು ಅತ್ಯಂತಕುತೂಹಲದಿಂದ ಪ್ರಶ್ನೆಮಾಡಿದಳು.

೩೮-೪೦. ಆಗ ಆವಳು "ಎಲೆ ರಾಣಿ ! ಕೇಳು ಅವನ ತಲೆ ಬಟ್ಟತಲೆ (ಕೂದಲಿಲ್ಲದ್ದು), ಹಣೆಯು ಹಳ್ಳಬಿದ್ದಿದೆ, ಕಣ್ಣುಗಳಲ್ಲಿ ನೀರುಸುರಿಯು ತ್ತಿದೆ, ಬಾಯಿಯಲ್ಲಿ ನೊರೆಹರಿಯುತ್ತದೆ, ಮೂಗು ಚಪ್ಪಟೆಯಾಗಿದೆ, ಕಿವಿ ಗಳು ಸುರುಟಿಕೊಂಡಿವೆ, ಹಲ್ಲುಗಳು ಸಂದುಬಿಟ್ಟಿವೆ, ಕತ್ತು ಕುಸಿಬಿದ್ದಿದೆ,

ಕಱಿದೊವಲ ಪಱಿಯ ಕುಱಿಯಂ ।
ತೆಱೆದಂದಂ ಮೆಯ್ಯನಾತವಮಾತನ ಕೆಯ್ಗಳ್ ॥
ಕುಱುಗಿಣ್ಣು ಕೂನಬೆಂ ಕಾಲ್ ।
ಮಱೆಯಿಸುವುದು ಟೊಂಕಮುಱಿದ ಕತ್ತೆಯ ಕಾಲಂ ॥ ೩೯

ಮುದುಗರಡಿಯ ಮುರುದೊಲವಂ ।
ದದೆಕ ಱಿಯುಂ ತಾಳಕಾಯ ಮೋಳಿಗೆಯೊಂದಂ ॥
ದದ ಮುರುಡನಷ್ಟವಕ್ರಂ ।
ಮೊದಲೊಣಗಿದ ಕೂನಗೊರಡಿನಂದದೆ ಕೊಂಕಂ ॥ ೪೦

ಎಂದೊಡೆ ದೂದವಿಗವಳಿಂ ।
ತೆಂದಳ್ ಗರಗರಿಕೆ ಕೊರಲೊಳೀಕ್ಷಣದೊಳ್ವಾ ॥
ರ್ಬಿಂದು ಮಿಡುಕೆರ್ದೆಯೊಳೊದವೆ ಪು ।
ಳಿಂದನ ಕಣೆಗಟ್ಟೆ ನಿಂದ ವನಹರಿಣಿಯವೋಲ್ ॥ ೪೧

ಕರಿದಾದೊಡೆ ಕತ್ತುರಿಯಂ ।
ಮುರುಡಾದೊಡೆ ಮಲಯಜಂಗಳಂ ಕೊಂಕಿಮೊಡೇಂ ॥
ಸ್ಮರಚಾಪಮನಿಱಿಕೆಯ್ವರೆ ।
ಮರುಳೇ ಪೊಲ್ಲಮೆಯೆ ಲೇಸು ನಲ್ಲರ ಮೆಯ್ಯೊಳ್ ॥ ೪೨

---

ಎದೆಯು ಹಳ್ಳವಾಗಿದೆ, ಬೆನ್ನು ಗುಡ್ಡೆಯಾಗಿದೆ, ಹೊಟ್ಟೆಯು ಊದಿದೆ, ಕೆಳಹೊಟ್ಟೆಯು ಹೂತುಹೋಗಿದೆ, ಚರ್ಮವನ್ನು ಕೊಳೆಯಿಸಲು ಹಾಕಿರುವ ಹಳೆಯದಾದ ಗುಳಿಯ ಬಾಯನ್ನು ತೆರೆದರೆ ಬರುವಂತಹ ದುರ್ವಾಸನೆಯು ಆತನ ದೇಹದಿಂದ ಬರುತ್ತಿದೆ, ಕೈಗಳು ಕುರುಗಿಣ್ಣುಗಳಾಗಿವೆ, ಗೂನು ಬೆನ್ನು, ಕಾಲುಗಳೋ ನಡುಮುರಿದ ಕತ್ತೆಯ ಕಾಲುಗಳನ್ನು ಮರೆಯಿಸುತ್ತಿವೆ, ಚರ್ಮವು ಮುದಿಕರಡಿಯ ಜೋಲುಬಿದ್ದ ಚರ್ಮದಂತೆ ಕಪ್ಪಾಗಿದೆ, ತಾಳೇಕಾಯಿಯ ಮೋಳೆಯಂತೆ ತರಕಲಾಗಿದೆ, ಅಷ್ಟವಕ್ರನಾಗಿ ಒಣಗಿದ ಬೇರುಳ್ಳ ಕೊರಡಿನಂತೆ ಡೊಂಕುಡೊಂಕಾಗಿರುವನು."

೪೧-೪೩. ಎಂದು ಹೇಳಿದ ಆ ಸಖಿಯ ವರ್ಣನೆಯನ್ನು ಕೇಳಿದೊಡನೆಯೇ ಅವಳಿಗೆ (ಅಮೃತಮತಿಗೆ) ಗಂಟಲಲ್ಲಿ ಗರಗರಶಬ್ದವುಂಟಾಯಿತು (ಗದ್ಗದ ಸ್ವರವುಂಟಾಯಿತು), ಕಣ್ಣಿನಲ್ಲಿ ನೀರೂರಿತು, ಎದೆಯಲ್ಲಿ ಸ್ಪಂದನ ವುಂಟಾಯಿತು, (ಎದೆ ಬಡಿದುಕೊಳ್ಳಲಾರಂಭಿಸಿತು). ಬೇಟೆಗಾರನ ಗುಂಗೆ ಸಿಕ್ಕಿ ನಿಂತಿರುವ ಜಿಂಕೆಯ ಮರಿಯಂತೆ ಸ್ತಬ್ಧಳಾದಳು. ಆದರೂ ಅವಳಿ

ಒಲವಾದೊಡೆ ರೂಪಿನ ಕೋ।
ಟಲೆಯೇವುದೊ ಕಾರ್ಯವಾಗೆ ಕಾರಣದಿಂದಂ ॥
ಫಲಮೇನಿಂದೆನಗಾತನೆ।
ಕುಲದೈವಂ ಕಾಮದೇವನಿಂದ್ರಂ ಚಂದ್ರಂ ॥ ೪೩

ಎಂದಾಕೆಗೆ ಲಂಚಮನಿ।
ತ್ತಿಂದುವನೆಂದೆರವಿಗೊಂಡು ಕಳಿಪುವುದುಮವಳ್ ॥
ಸಂದಿಸಿದೊಡಮೃತಮತಿ ರಾ।
ತ್ರಿಂದಿವಮಾತನೊಳೆ ಸಲಿಸಿದಳ್ ತೆಱಪುಗಳಂ ॥ ೪೪

ಆ ವಿಕಟಾಂಗನೊಳಂತಾ।
ದೇವಿಗೆ ರುಚಿಯಾಗೆ ರತಿಫಲಾಸ್ವಾದನದಿಂ ॥
ಬೇವಂ ಮೆಚಿದ ಕಾಗೆಗೆ।
ಮಾವಿಱಿದಪ್ಪಂತೆ ಪತಿಯೊಳಿಱಿದಾಯ್ತು ಮನಂ ॥ ೪೫

---

ಗುಂಟಾಗಿದ್ದ ಮೋಹವು ಕಡಿಮೆಯಾಗಲಿಲ್ಲ, ಮನಸ್ಸನ್ನು ತಿರುಗಿಸಲಾಲದೆ "ಎಲೆ ಸಖಿ! ಕಪ್ಪುಬಣ್ಣವಾಗಿರುವುದೆಂದು ಕಸ್ತೂರಿಯನ್ನೂ, ಡೊಂಕಾಗಿರುವುದೆಂದು ಶ್ರೀಗಂಧವನ್ನೂ, ಬಗ್ಗಿವಕ್ರವಾಗಿರುವುದೆಂದು ಕಾಮನ ಬಿಲ್ಲನ್ನೂ ತಿರಸ್ಕಾರಮಾಡುವುದುಂಟೇ? ಹುಚ್ಚಿ! ನಾವು ಪ್ರೀತಿಸುವವರಲ್ಲಿರುವ ಕೆಟ್ಟದ್ದೇ (ನ್ಯೂನತೆ) ಒಳ್ಳೆಯದು. ಪ್ರೀತಿಯುಂಟಾಗಲು ರೂಪು ಬೇಕು. ಪ್ರೀತಿಯುಂಟಾದಮೇಲೆ ರೂಪಿನ ಗೋಜೇಕೆ? (ರೂಪಿಲ್ಲವೆಂಬ ತೊಂದರೆಯೇಕೆ). ಕಾರ್ಯವಾದಮೇಲೆ ಕಾರಣದಿಂದ ಫಲವೇದು? (ಮೋಹಿಸಿದಮೇಲೆ ಒಳ್ಳೆಯದು ಕೆಟ್ಟದ್ದೆಂಬ ವಿಚಾರದಿಂದ ಪ್ರಯೋಜನವೇನು). ಇಂದು ನನಗೆ ಅವನೇ ಕುಲದೇವರು; ಅವನೇ ಮನ್ಮಥನು; ಅವನೇ ಇಂದ್ರ, ಅವನೇ ಚಂದ್ರ ಎಂದುತ್ತರವಿತ್ತು.

೪೪. ಆ ದಾದಿಗೆ ಬಹುಮಾನವನ್ನು (ಲಂಚ) ಕೊಟ್ಟು ತಾನು ಹೇಳಿದ ಮಾತನ್ನು ಅವನಿಗೆ ತಿಳಿಸುವಂತೆ ಒಡಂಬಡಿಸಿ ಕಳುಹಿಸಲು, ಆ ಸಖಿಯು ಅವರಿಬ್ಬರನ್ನೂ ಸೇರಿಸಿದಳು. ಅಮೃತಮತಿಯು ರಾತ್ರಿಹಗಲು ಅವನೊಡನೆ ಸುಖವನ್ನನುಭವಿಸುತ್ತಿದ್ದಳು.

೪೫. ವಿಕೃತಾಂಗನಾದ ಆ ಅಷ್ಟವಂಕನ ಸಂಸರ್ಗವು ಆ ರಾಣಿಗೆ ಸುಖದಾಯಕವಾಗಿ ತೋರಿತು. ಬೇವಿನಕಾಯನ್ನು ಮೆಚ್ಚಿ ತಿನ್ನುವ ಕಾಗೆಗೆ ಮಾವಿನ ಚಿಗುರು ರುಚಿಯಾಗದೇ ಹೋಗುವಂತೆ ಅವಳಿಗೆ ತನ್ನ ಪತಿಯಲ್ಲಿ ಅನುರಾಗವು ಕಡಮೆಯಾಗುತ್ತ ಬಂದಿತು (ಮನಸ್ಸಿಳಿಯುತ್ತ ಬಂದಿತು).

ನೋಡುವ ಮಾತಾಡುವ ಬಾ ।
ಯ್ಗೂಡುವ ಪದನಮೃತಮತಿಗೆ ಪೂರ್ವಸ್ಥಿತಿಯಿಂ ॥
ಪಾಡಱಿಯುತ್ತಿರೆ ನೋಡ ।
ಲ್ವೇಡಿ ಯಶೋಧರನದೊರ್ಮೆ ಶಯ್ಯಾತಳದೊಳ್ ॥ ೪೬

ಮಱೆದೊಱಗಿದನಂತೆವೊಲಿರೆ ।
ಪಱಮೆ ಪಗಲ್ಮುಗಿಯೆ ಸಿಲ್ಕಿ ಕೈರವದಿನಿರುಳ್ ॥
ಪೊಱಮಡುವಂತರಸನ ತೋ ।
ಳ್ಸೆಱೆಯಿಂ ನುಸುಳ್ದರಸಿ ಜಾರನಲ್ಲಿಗೆ ಪೋದಳ್ ॥ ೪೭

ಬೆನ್ನೊಳೆ ಪೋದಂ ದೋಷದ ।
ಬೆನ್ನೊಳೆ ಸಂಧಿಸುವ ದಂಡದಂತರಸಂ ಪ್ರ ॥
ಚ್ಛನ್ನದಿನುರ್ಚಿದ ಬಾಳ್ವೆರ ।
ಸನ್ನೆಗವಾ ಬದಗನರಸಿ ತಡೆದೊಡೆ ಮುಳಿದಂ ॥ ೪೮

ಮುಳಿದಾಕೆ ತಂದ ಮಾಲಾ ।
ಮಳಯಜತಾಂಬೂಲಜಾಲಮಂ ಕೆದಱೆ ಕುರು ॥
ಳ್ಗಳನೆಟಿದು ಬೆನ್ನ ಮಿಳಿಯಿಂ ।
ಕಳಹಂಸೆಗೆ ಗಿಡಗನೆಱಗಿದಂತಿರೆ ಬಡಿದಂ ॥ ೪೯

---

೪೬-೪೭. ತನ್ನನ್ನು ನೋಡುವಾಗಲೂ, ತನ್ನೊಡನೆ ಮಾತನಾಡುವಾಗಲೂ, ತಾನು ಚುಂಬಿಸುವಾಗಲೂ ತನ್ನ ರಾಣಿ ಅಮೃತಮತಿಗಿರುತ್ತಿದ್ದ ಪ್ರಣಯ ಸ್ಥಿತಿಯು ರೀತಿಗೆಡುತ್ತಿರಲು, ಇದನ್ನು ಪರೀಕ್ಷಿಸಬೇಕೆಂದು ರಾಜನು ಒಂದು ದಿನ ಹಾಸಿಗೆಯಲ್ಲಿ ಗಾಢನಿದ್ರೆಬಂದವನಂತೆ ಮಲಗಿರಲು, ಹಗಲೆಲ್ಲಾ ನೈದಿಲೆಪುಷ್ಪದೊಳಗೆ ಸಿಕ್ಕಿಕೊಂಡಿದ್ದು ಹಗಲುತೀರಿ ರಾತ್ರಿಯಾದೊಡನೆಯೇ ಅರಳುತ್ತಿರುವ ಆ ಪುಷ್ಪದಿಂದೀಚೆಗೆ ನುಸುಳಿ ಬರುವ ದುಂಬಿಯಂತೆ, ರಾಣಿಯು ಅರಸನ ತೋಳ್ಸೆರೆಯಿಂದ ಅಂದರೆ ಆಲಿಂಗನದಿಂದ ಮೆಲ್ಲನೆ ಜಾರಿ ತನ್ನ ವಿಟಪುರುಷನ ಸಮೀಪಕ್ಕೆ ಹೋದಳು.

೪೮. ಅಕಾರ್ಯದ—ಕೆಟ್ಟಕೆಲಸದ—ಹಿಂದೆಯೇ ಸೇರಿಬರುವ ಶಿಕ್ಷೆಯಂತೆ ಯಶೋಧರರಾಜನು ಒರೆತೆಗೆದ ಕತ್ತಿಯನ್ನು ಕೈಯಲ್ಲಿ ಹಿಡಿದುಕೊಂಡು ರಾಣಿ ಅಮೃತಮತಿಯ ಹಿಂದೆಯೇ ಹೋದನು. ಮುಂದೆ ಹೋಗುತ್ತಿದ್ದ ರಾಣಿಯು ಆ ಮಾವುತನ ಸಮೀಪಕ್ಕೆ ಹೋದೊಡನೆಯೇ ಆತನು ಹೊತ್ತು ಮೀರಿಬಂದದ್ದಕ್ಕಾಗಿ ಅವಳಮೇಲೆ ತುಂಬಾ ಕೋಪಗೊಂಡನು.

೪೯. ಕೋಪದಿಂದ ಅವಳು ತಂದಿದ್ದ ಗಂಧಪುಷ್ಪತಾಂಬೂಲಗಳನ್ನೆಲ್ಲಾ

ತೋರಮುಡಿವಿಡಿದು ಕುಡಿಯಂ ।
ನಾರಂ ಸದೆವಂತೆ ತದೆದು ಬೀಟಿಯ ಕಾಲಿಂ ॥
ಬಾರೇಟಿೞ ಬದಿಯನೊದೆದೊಡೆ ।
ಕೇರೆ ಪೊರಳ್ವಂತೆ ಕಾಲ ಮೇಲೆ ಪೊರಳ್ದಳ್ ॥ ೫೦

ತಡವಾದುದುಂಟು ನಲ್ಲನೆ ।
ಬಿಡು ಮುಳಿಯದಿರರಸನೆಂಬಪಾತಕನೆನ್ನಂ ॥
ತೊಡೆಯೇಱಿಸಿ ಕೇಳಿಕೆಯಾ ।
ದೊಡೆ ನೋಡುತ್ತಿರ್ದೆನುಂತೆ ನಿಲಲಣ್ಮುವೆನೇ ॥ ೫೧

ಕಿವಿಸವಿ ದನಿ ಕಣ್ಸವಿ ರೂ ।
ಪವಧರಿಸೆಲೆ ಗಜವೆಡಂಗ ನೀನುೞಿದೊಡೆ ಸಾ ॥
ವವಳೆನಗೆ ಮಿಕ್ಕ ಗಂಡರ್ ।
ಸವಸೋದರರೆಂದು ತಿಳಿಪಿದಳ್ ನಂಬುಗೆಯಂ ॥ ೫೨

---

ಚಲ್ಲಾಡಿ ಅವಳ ಮುಂದಲೆಯನ್ನು ಹಿಡಿದೆಳೆದು, ಗಿಡಗನು ಹಂಸೆಯಮೇಲೆ ಬೀಳುವಂತೆ, ಹಗ್ಗದಿಂದ ಅವಳ ಬೆನ್ನಿನಮೇಲೆ ಬಲವಾಗಿ ಹೊಡೆದನು.

೫೦. ಒಕ್ಕಲಿಗನು ನಾರನ್ನು ತೆಗೆಯುವಾಗ ಜುಂಗಿಸಿ ಎಳೆಯುವಂತೆ ಅವಳ ತುರುಬನ್ನು ಹಿಡಿದೆಳೆದು ತನ್ನ ಬಿರುಕುಕಾಲಿಂದವಳ ಮೈಯ್ಯಲ್ಲಿ ಬಾಸುಂಡೆ ಗಳೇಳುವಂತೆ ಬಲವಾಗಿ ಒದೆಯಲು, ಆಕೆಯು ಕೇರೆಯಹಾವು ಹೊರಳು ವಂತೆ ಹೊರಳಿ ಅವನ ಕಾಲುಗಳಮೇಲೆ ಬಿದ್ದಳು.

೫೧. ಬಿದ್ದವಳೆದ್ದು ಅವನನ್ನು ಕುರಿತು "ಪ್ರಾಣೇಶ್ವರನೆ! ನಾನೀದಿನ ವಿಳಂಬವಾಗಿ ಬಂದುದು ನಿಜ. ಹೋಗಲಿ ಕೋಪಿಸಿಕೊಳ್ಳಬೇಡ, ನನ್ನ ಗಂಡನೆನಿಸಿಕೊಳ್ಳುವ ಆ ಪಾತಕಿಯು ನನ್ನನ್ನು ತೊಡೆಯಮೇಲೆ ಕುಳ್ಳಿರಿಸಿ ಕೊಂಡು ಸರಸವಾಡಲುಪಕ್ರಮಿಸಿದ್ದುದರಿಂದ ಸಮಯವನ್ನು ನೋಡು ತ್ತಿದ್ದನು. ಸುಮ್ಮನೆ (ಕಾರಣವಿಲ್ಲದೆ) ನಾನು ತಡಮಾಡಬಲ್ಲೆನೆ?"

೫೨. "ನಿನ್ನಧ್ವನಿಯೇ ನನಗೆ ಕರ್ಣಾಮೃತ, ನಿನ್ನರೂಪೇ ನನ್ನಕಣ್ಣುಗಳ ಆನಂದ, ಎಲೆ ಆನೆಯೊಡೆಯನೆ! ಕೇಳು ನೀನು ನನ್ನನ್ನು ಬಿಟ್ಟರೆ ನಾನು ಸಾಯುವೆನು. ನೀನು ಹೊರತು ಮಿಕ್ಕ ಪುರುಷರೆಲ್ಲಾ ನನಗೆ ಅಣ್ಣ ತಮ್ಮಂದಿರು" ಎಂದು ಅವನಿಗೆ ನಂಬಿಕೆಯುಂಟಾಗುವಂತೆ ಹೇಳಿ ಸಮಾಧಾನಪಡಿಸಿದಳು.

ಆಗಳ್ಪಾಳ್ಕಿಮಿರ್ದುದು ತೋ।
ಳ್ತೊಗಿದುದು ಮನಂ ಕನಲ್ದುದಿರ್ವರುಮನೆರ॥
ಟ್ಬಾಗಂ ಮಾಡಲ್ ಧೃತಿಬಂ।
ದಾಗಳ್ ಮಾಣೆಂಬ ತೆಱದೆ ಪೇಸಿದನರಸಂ॥ ೫೩

ಪರನೃಪರನಲ್ಲದೀ ಪುಱು।
ಕರನಿಱಿವುದೆ ಮಚ್ಛುಜಾಸಿಯಿದು ಕೈಯಿಕ್ಕಲ್॥
ಕರಿಕರಿಗಲ್ಲದಿರುಂಪೆಗೆ।
ಪರಿವುದೆ ಹರಿ ಕರಿಯನಲ್ಲದಿಱಿವುದೆ ನರಿಯಂ॥ ೫೪

ಅಸಿಲತೆ ರಣಧೌತಮದೀ।
ಮಸಿಮುಸುಡನ ಜೀವಕಪ್ಪಿನಿಂ ಕಂದಿದೊಡೆ॥
ಣ್ದೆಸೆಯನಡರ್ದೆನ್ನ ಕೀರ್ತಿ।
ಪ್ರಸರದ ಕುಡಿ ಕೈಪೆಸೊರೆಯ ಕುಡಿಯವೊಲಕ್ಕುಂ॥ ೫೫

---

೫೩. ಇದೆಲ್ಲವನ್ನೂ ನಿಂತು ನೋಡುತ್ತಿದ್ದ ಆ ಯಶೋಧರನ ಮನಸ್ಸಿನಲ್ಲಿ ಕೋಪವು ಮೀರಿತು. ಅವರಿಬ್ಬರನ್ನೂ ಎರಡೆರಡುತುಂಡಾಗಿ ಕತ್ತರಿಸುವುದಕ್ಕಾಗಿ ಕೈಯಲ್ಲಿದ್ದ ಕತ್ತಿಯು ಮೇಲಕ್ಕೆ ನಿಗುರಿತು, ತೋಳುತೂಗಾಡಿತು, ಆಗ ಧೈರ್ಯ (ಶಾಂತಿ, ತಾಳ್ಮೆ) ವು ಬಂದು ಬೇಡವೆಂದು ಹೇಳಿತೋ ಎಂಬಂತೆ ಆ ಕೆಲಸವನ್ನು ತಡೆದು ಜುಗುಪ್ಸೆಗೊಂಡು ನಿಂತನು.

೫೪. ಬಳಿಕ ಮನಸ್ಸಿನಲ್ಲಿ ಹೀಗೆಂದು ಯೋಚಿಸಿದನು, "ನನ್ನ ತೋಳಿನಲ್ಲಿರುವ ಈ ಕತ್ತಿಯಿಂದ ರಣದಲ್ಲಿ ಶತ್ರುರಾಜರನ್ನು ಕೊಲ್ಲುವುದಕ್ಕೆ ಬದಲು ಈ ಹುಳುಗಳನ್ನು (ನಿಕೃಷ್ಟರಾದವರನ್ನು) ಕೊಲ್ಲವುದೇ? ಆನೆಯು ಆನೆಯ ಮೇಲಲ್ಲದೆ ಇರುವೆಗಳಮೇಲೆ ಬೀಳುವುದೆ? ಸಿಂಹವು ಆನೆಯನ್ನಲ್ಲದೆ ನರಿಯನ್ನು ಕೊಲ್ಲುವುದೇ? ನಾನು ಈ ದುರ್ಬಲರನ್ನು ಕೊಲ್ಲುವುದು ನ್ಯಾಯವಲ್ಲ."

೫೫. ಯುದ್ಧದಿಂದ ಪರಿಶುದ್ಧವಾದ ನನ್ನೀ ಖಡ್ಗದಿಂದ ಈ ಸಿಂಗಳೀಕನನ್ನು ಕೊಂದು ಅವನ ಜೀವವೆಂಬ ಮಸಿಯಿಂದದನ್ನು ಕರೆಗೊಳಿಸಿದರೆ (ಕಪ್ಪಾಗಿ ಮಾಡಿದರೆ), ದಿಗಂತವ್ಯಾಪಿಯಾದ ನನ್ನ ಕೀರ್ತಿಯಕೊನೆಯು ಕಹಿ ಸೋರೆಯಕುಡಿಯಂತೆ ಕಹಿಯಾಗುವುದು (ಎಂದರೆ ಅಪಯಶಸ್ಸು ಬರುವುದು).

ಅಱಿವುಳ್ಳೊಡೆ ನೋಡಿಱಿದೊಡ |
ನೞಿವುದೆ ಪೆಣ್ತಪ್ಪಿ ನಡೆಯೆ ಛಿಃ ! ಕಿಸುಗುಳವೆಂ ||
ದುಱಿವುದೆ ಗೆಲ್ಲಂಗೊಂಡಾ [ಕೊಂದಾ] |
ಪುೞು ಪುಟ್ಟುವ ನರಕದೊಳಗೆ ಬೀೞ್ವನೆ ಚದುರಂ || ೫೬

ಎಂದು ನೆನೆದಿಱಿಯಲೊಲ್ಲದೆ |
ಬಂದರಸಂ ಮುನ್ನಿನಂತೆ ಪವಡಿಸೆ ತಾನುಂ ||
ಬಂದು ಮಱಿದರಸನೊಱಗಿದ |
ನೆಂದೊಯ್ಯನೆ ಸಾರ್ದು ಪೆಱಗೆ ಪಟ್ಟಿರ್ಪಾಗಳ್ ‖ ೫೭

ಮುಟ್ಟಿದೊಡೆ ಸುಖದ ಸೋಂಕಂ |
ಪುಟ್ಟಿಸುವಾ ವಾಮೆ ವಾಮೆಯಾದೊಡೆ ಮುನ್ನಂ ||
ಬಟ್ಟಿದುವೆನಿಸುವ ಮೊಲೆ ನಿ |
ರ್ವಟ್ಟಿದುವಾದುವು ನೃಪಂಗೆ ಬೆಸೋಂಕಲೊಡಂ || ೫೮

---

೫೬. ಪೆಣ್ತಪ್ಪಿನಡೆಯೆ—ಹೆಂಗಸು ತನ್ನ ಪತಿಯಲ್ಲಿದ್ದ ಪ್ರಣಯವನ್ನು ದೂರಮಾಡಿ ಮತ್ತೊಬ್ಬನಲ್ಲಿ ಅನುರಕ್ತೆಯಾದರೆ, ಅವಳನ್ನು ಕೊಂದುದರಿಂದ ಆ ಅನುರಾಗವನ್ನು ತಪ್ಪಿಸಿದಂತಾಗುವುದಿಲ್ಲ. ಛಿಃ ! ಇದು ನೀಚವಾದುದೆಂದು ಜುಗುಪ್ಸೆಯಿಂದ ಅವಳನ್ನು ತ್ಯಜಿಸುವುದೇಮೇಲು (ಜಯವು). ಬುದ್ಧಿಶಾಲಿಯು ಪಾಪಿಷ್ಠಳಾದವಳನ್ನು ಕೊಂದು ಅವಳು ಹುಟ್ಟುವ ನರಕಕ್ಕೆ ತಾನೂ ಬೀಳುವನೆ ?"

೫೭. ಮೇಲೆ ಹೇಳಿದಂತೆ ಯೋಚಿಸಿ ಅವರನ್ನು ಕೊಲ್ಲಲಿಷ್ಟಪಡದೆ ಹಿಂತಿರುಗಿ ಬಂದು ತಾನು ಮೊದಲು ಮಲಗಿದ್ದಂತೆ ಮಲಗಿರಲು, ಅಮೃತಮತಿಯು ತಾನೂ ಬಂದು ರಾಜನು ನಿದ್ರಿಸುತ್ತಿರುವನೆಂದು ಭಾವಿಸಿ ಮೆಲ್ಲನೆ ಅವನ ಪಕ್ಕದಲ್ಲಿ ಮಲಗಿಕೊಂಡಳು.

೫೮. ಆಗ ಸ್ಪರ್ಶವಾದೊಡನೆ ಪುಳಕವನ್ನುಂಟುಮಾಡುತ್ತಿದ್ದಾ ವಾಮೆಯು (ಹೆಂಗಸು) ವಾಮೆ (ವಕ್ರಳು) ಯಾದುದರಿಂದ, ಆ ರಾಜನಿಗೆ ಪಕ್ಕದಲ್ಲಿ ಮಲಗಿದ್ದ ಅಮೃತಮತಿಯ ಕುಚಗಳು ಬೆನ್ನನ್ನು ಸೋಕಲು, ಮೊದಲು ಮೃದುವಾಗಿತೋರುತ್ತಿದ್ದುವು ಈಗ ಕಠಿನವಾಗಿಯೂ, ಅಸಹ್ಯಕರವಾಗಿಯೂ ತೋರಿದುವು.

ಬದಗುಳಿಗನ ತೋಳ್ಮುಟ್ಟಿದ|
ಸುದತಿಯೊಳಿಂಬಾಗದಂತೆ ಕೆಟ್ಟುದು ಪುಳಿ ಮು ||
ಟ್ಟಿದ ದುಗ್ಧದಂತೆ ನೀರ್ಮು |
ಟ್ಟಿದ ಜೇನೆಯ್ತೆಱದೆ ಪತಿಗೆ ಶಯ್ಯಾತಳದೊಳ್ || ೫೯

ಆಗಂಡನನಪ್ಪಿದ ತೋಳ್ |
ಪೋಗಂಡನಪ್ಪುವಂತೆ ಮಾಡಿದ ಬಿದಿಯಂ ||
ಮೂಗಂ ಕೊಯ್ದಿಟ್ಟಿಗೆಯೊಳ್ |
ಪೋಗೊರಸದೆ ಕಂಡೆನಾದೊಡೇಂ ಬಿಟ್ಟಪೆನೇ || ೬೦

ಎನೆಕೇಳ್ದು ಮಾರಿದತ್ತಾ |
ವನಿಪವರಂಗಭಯರುಚಿ ಬಳಿಕ್ಕಿಂತೆಂದಂ ||
ಮನಸಿಜನ ಮಾಯೆವಿಧಿವಿಳ|
ಸನದ ನೆರಂಬಡೆಯೆ ಕೊಂದು ಕೂಗದೆ ನರರಂ || ೬೧

---

೫೯- ಆ ಸೆಜ್ಜೆಯಮನೆಯಲ್ಲಿ ಆ ರಾಜನ ಮನಸ್ಸು, ತನ್ನ ಸೇವಕನ ತೋಳ್ಮುಟ್ಟಿದ (ಸೇವಕನನ್ನು ಮೋಹಿಸಿ ಕೂಡಿದ) ಹೆಂಡತಿಯಲ್ಲಿ ಪ್ರೀತಿ ಯುಂಟಾಗದಂತಾಗಿ (ಪ್ರೀತಿಯುನಾಶವಾಗಿ), ಹುಳಿಬಿದ್ದ ಹಾಲಿನಂತೆಯೂ ನೀರುಬೆರೆದ ಜೇನುತುಪ್ಪದಂತೆಯೂ ಬಹಳವಾಗಿ ಕದಡಿ ಒಡೆದು ಹೋಯಿತು.

೬೦. ಇದುವರೆಗೆ ಅಭಯರುಚಿಯು ಹೇಳಿಮುದನ್ನೆಲ್ಲಾ ಕೇಳುತ್ತಿದ್ದ ಮಾರಿದತ್ತರಾಜನು ತುಂಬಾ ಸಿಟ್ಟುಗೊಂಡು "ಅಂತಹ ಮನ್ಮಥಾಕಾರ ನಾದ ಪತಿಯನ್ನು ಬಿಡಿಸಿ ವಕ್ರನೂ ಕುರೂಪಿಯೂ ಆದವನನ್ನು ಮೋಹಿಸು ವಂತೆ ಮಾಡಿದ ವಿಧಿಯನ್ನು (ಅದೃಷ್ಟ) ನಾನು ಕಂಡೆನಾದರೆ ಅವನ ಮೂಗನ್ನು ಕುಯಿದು ಇಟ್ಟಿಗೆಯಿಂದಾ ಗಾಯವನ್ನು ತೀಡದೆ ಬಿಡುವೆನೆ?" ಎಂದು ಹೇಳಿದನು.

೬೧-೬೨. ಇದನ್ನು ಕೇಳಿದ ಅಭಯರುಚಿಕುಮಾರನು "ಎಲೆ ರಾಜನೆ! ಮನ್ಮಥನ ಮಾಯೆಯು ವಿಧಿವಿಲಾಸದ ಸಹಾಯವನ್ನು ಹೊಂದಿದರೆ ಮನುಷ್ಯರನ್ನು ನಾಶಮಾಡದಿರುವುದೆ ? ಅಧಿಕಾರ, ರೂಪು, ಸೊಬಗು ಇವು ಗಳಿಂದ ಮೆರೆಯುವ ಜನರ ಮೂಗಿನಮೇಲೆ, ಹೆಂಗಸರ ವಿಕಾರಬುದ್ಧಿಯ ಬಲದಿಂದಕೂಡಿ, ಮನ್ಮಥನು ನಾಟ್ಯವಾಡದೇ ಇರುವುದಿಲ್ಲ. (ಹೆಂಗಸರ ವಿಕಾರಬುದ್ಧಿಯ ಸಹಾಯದಿಂದ ಮನ್ಮಥನು ಜನರನ್ನು ಬೊಂಬೆಗಳನ್ನು ಕುಣಿಸುವಂತೆ ನಾನಾರೀತಿಯಲ್ಲಿ ಕುಣಿಯಿಸುತ್ತಾನೆಂದು ಭಾವವು).

ಪದವಿಯ ರೂಪಿನ ಸೊಬಗಿನ ।
ಮದಮಂ ಮಾಡುವರ ಮೂಗಿನೊಳ್ ಪಾತ್ರಮನಾ ॥
ಡದೆ ಮಾಣನನಂಗನವಂ ।
ಸುದತಿಯರ ವಿಕಾರಮೆಂಬ ವಿದ್ಯಾಬಲದಿಂ ॥ ೬೨

ಆ ರಾಜಕುಮಾರಂ ಬೞಿ ।
ಕಾರೂಪಿನಪೆಂಡಿರಿಂತು ಕೞಿಪಾದೊಡೆ ಛೀ ! ॥
ಕೂರಿಸುವ ಕೂರ್ಪಮಾತಂ ।
ಮಾರಿಗೆ ಕುಡು ಸಿರಿಯನೊಲ್ಲೆ ಸುಡು ಹೇಗೆಂದಂ ॥ ೬೩

ಒಲಿಸಿದಪೆಣ್ಪೆಱರೊಳ್ಸಂ ।
ಚಲಿಸಿದೊಡಿದು ಸುಖಮೆ ಪರಮಸುಖಸಂಪದಮಂ ॥
ಸಲಿಯಿಸಲೆ ನೆಱಿವ ಮುಕ್ತಿಯ ।
ನೊಲಿಸುವೆನಿನ್ನೊಲ್ಲೆನುೞಿದ ಪೆಂಡಿರನಣ್ಪಂ ॥ ೬೪

ಎಂದಿಂತು ಬಹುವಿಕಲ್ಪದ ।
ದಂದುಗದೊಳಿ ಬೆಳಗುಮಾಡಿ ಮೆಯ್ಮರಿದಿರ್ದಂ ॥
ಬಂದು ತೊಡೆವೊಯ್ದು ಬೋಧಿಸಿ ।
ದಂದದಿನೆಸಗಿತ್ತು ಸುಪ್ರಭಾತಾತೋದ್ಯಂ ॥ ೬೫

---

೬೩-೬೪. ಹೀಗೆಂದು ಮಾರಿದತ್ತನಿಗೆ ಹೇಳಿ ಕಥೆಯನ್ನು ಮುಂದುವರಿಸಿದನು. "ಆ ಯಶೋಧರರಾಜನು ತನ್ನ ಪ್ರೀತಿಯಹೆಂಡತಿಯು ಈ ರೀತಿಯಾಗಿ ಕೆಟ್ಟು—ಅಸಹ್ಯಳಾಗಲು—ಛೀ ! ಪ್ರೀತಿಸುವ ಪ್ರೀತಿಸಿಕೊಳ್ಳುವ ಮಾತು ಹಾಳಾಗಲಿ, ನನಗೀ ಐಶ್ವರ್ಯವೂ ಬೇಡ, ಇದನ್ನು ಸುಡು. ನಾವು ಪ್ರೀತಿಸುವ ಹೆಣ್ಣು ಮತ್ತೊಬ್ಬನನ್ನು ಸೇರಿದರೆ ಅದು ಸುಖವೇ? ಆದುದರಿಂದ ಇಂತಹ ಹೆಂಗಸನ್ನು ಪ್ರೀತಿಸುವುದಕ್ಕಿಂತ ಶಾಶ್ವತವಾದ ಮುಕ್ತಿಸುಖವನ್ನು ಕೊಡುವ ಮೋಕ್ಷಲಕ್ಷ್ಮಿಯನ್ನು ಒಲಿಸಿಕೊಳ್ಳುವೆನು ; ಇನ್ನು ಬೇರೆ ಹೆಂಡತಿಯರನ್ನು ಪ್ರೀತಿಸುವುದು ಬೇಡವೇಬೇಡ."

೬೫. ಎಂದು ಈ ಬಗೆಯಲ್ಲಿ ನಾನಾವಿಧವಾದ ಮನಃಕ್ಲೇಶದಿಂದಲೇ ಬೆಳಗಾಗುವವರೆಗೂ ಮಲಗಿದ್ದು ಬೆಳಗಿನಜಾವದಲ್ಲಿ ಬಾರಿಸುವ ವಾದ್ಯಧ್ವನಿಯು ತೊಡೆಯನ್ನು ತಟ್ಟಿ ಎಳಿಸಿದಂತೆ ಮೈಮುರಿದೆದ್ದನು.

ಕೃತನಿತ್ಯಸಾನನಾವೀ |
ಕ್ಷಿತಘೃತನಾಸ್ಪೃಷ್ಟಕಪಿಳನೊಯ್ಯನೆ ಸಾರ್ದಂ ||
ಕತಿಪಯಪರಿಚಿತಪರಿಜನ |
ಚತುರವಚಃಪ್ರಚಯಚತುರನರಸಿಯನರಸಂ || ೬೬

ಲಂಪಣನವೊಲೇನಾನುಮ |
ಲಂಪಿನ ನಗೆನುಡಿಯ ನೆವದೆ ನೆಯ್ದಿಲಪೂವಿಂ ||
ದಂ ಪೊಯ್ಯೆ ಮೂರ್ಛೆವೋದಳ್ |
ಸಂಪಗೆಯಲರ್ಗಂಪುವೊಯ್ದ ತುಂಬಿಯ ತೆಱದಿಂ || ೬೭

ಅಕಟಕಟ ! ನೊಂದಳೆತ್ತಿರೆ |
ಸುಕುಮಾರಿಯನೆನುತುಮಿನಿತು ಕೊಂಕಿಂ ನುಡಿದಂ ||
ಪ್ರಕಟಿತಚಿತ್ತಂ ಭೂನಾ |
ಯಕನೇನಣಕಕ್ಕೆ* ಸವಣನುಂ ಸ್ಯೆರಿಪನೇ || ೬೮

---

೬೬. ಬಳಿಕ ರಾಜನು ನಿತ್ಯಕರ್ಮಗಳನ್ನು ತೀರಿಸಿದವನೂ, ನಿತ್ಯದಾನ ಮಾಡಿದವನೂ, ತುಪ್ಪದಲ್ಲಿ ಮುಖವನ್ನು ನೋಡಿಕೊಂಡವನೂ, ಕರು ಸಹಿತವಾದ ಕಪಿಲವರ್ಣದ ಧೇನುವನ್ನು ಮುಟ್ಟಿದವನೂ ಆಗಿ ಪರಿಚಿತರಾದ ಕೆಲವು ಪರಿಜನರೊಡನೆ ಕೂಡಿದವನಾಗಿ ಮಾತನಾಡುತ್ತಾ ತನ್ನ ರಾಣಿಯ ವಾಸಕ್ಕೆ ಬಂದನು.

೬೭. ಬಂದವನು ಒಳ್ಳೆಯ ರಸಿಕನಂತೆ ಪ್ರೀತಿಯಿಂದ ಮಾತನಾಡುತ್ತಾ ನಗುತ್ತಾ ಹಾಸ್ಯಮಾಡುವ ನೆವದಿಂದ ರಾಣಿಯ ಕಿವಿದೊಡವಾಗಿದ್ದ ನೈದಿಲೆ ಹೂವನ್ನು ಸೆಳೆದುಕೊಂಡು ಅದರಿಂದ ರಾಣಿಯನ್ನು ಹೊಡೆದನು. ಅವಳು ಸಂಪಿಗೆಹೂವಿನ ವಾಸನೆಗೆ ಸಿಕ್ಕಿದ ತುಂಬಿಯಂತೆ ಒಡನೆಯೇ ಮೂರ್ಛೆ ಗೊಂಡಂತೆ ನಟಿಸಿದಳು (ನೈದಿಲೆಹೂವಿನಿಂದ ರಾಜನು ಹೊಡೆದುದಕ್ಕೆ ತಾನು ಸುಕುಮಾರಿ ಆ ಹೊಡೆತವನ್ನು ತಡೆಯಲಾರದವಳೆಂಬುದನ್ನು ನಟಿಸಿದಳು).

೬೮. ಆಗ ರಾಜನೂಕೂಡ ಮನಸ್ಸಿನಲ್ಲಿ ಅವಳ ಕಪಟನಾಟಕವೆಂತಹದು ಎಂದು ಯೋಚಿಸಿ, ಪ್ರಕಾಶ್ಯವಾಗಿ "ಅಯ್ಯಯ್ಯೋ ! ಬಹಳನೋವಾಯಿ ತೇನೋ ? ಸುಕುಮಾರಿಯಲ್ಲವೇ ? ಮೆಲ್ಲನೆತ್ತಿ ಎಂದು ವ್ಯಂಗ್ಯವಾಗಿ ನುಡಿದನು.. ಹೀಗೆ ರಾಜನು ಅವಳ ದುಷ್ಕೃತ್ಯಕ್ಕೆ ಬೇಸರಗೊಂಡುದೇನೂ ಆಶ್ಚರ್ಯವಲ್ಲ. ಅವಳ ದುಷ್ಕೃತ್ಯಕ್ಕೆ (ಕಪಟನಾಟಕಕ್ಕೆ) ನಿರ್ಗ್ರಂಥನಾದ ಜೈನಮುನಿಯೂ ಸೈರಿಸಲಾನು.

---

* ಪಾಪಾಣಕೇ ಕುತ್ಸಿತೈಃ || ಹಲಾಯುಧ ||

ದೈವದಿನೆಂತಕ್ಕಂದಿನ |
ಸಾವೋಸರಿಸಿದುದು ಕರ್ಣಭೂಷಾವಳಿ ಭೂ ||
ಷಾವಳಿಯಾಗದೆ ಸೆಳೆದೊಡೆ |
ಸಾವಲ್ಲಿಗೆ ಕಯ್ದುವಾಯ್ತು ನೆಯ್ದಿಲಕುಸುಮಂ || ೬೯

ಪೋದಿರುಳಿನ ಕಿತವ್ತುಡಂ |
ಮೂದಲೆಯಾಗಿಂತು ನುಡಿದೊಡಱಿದುದನಱಿದಾ ||
ಪಾದರಿ ಬೇಸತ್ತವೊಲಿರೆ |
ಪೋದಂ ಬಗೆಕದಡಿ ತಾಯ ಪೊರೆಗೆ ನೃಪೇಂದ್ರಂ || ೭೦

---

೬೯. ಅದೃಷ್ಟಬಲದಿಂದಾಕೆಗೆ ಅಂದಿನ ಸಾವು ಹೇಗೋ ತಪ್ಪಿಹೋಯಿತು. ಕಿವಿಗಲಂಕರಿಸಿಕೊಳ್ಳುವ ನೈದಿಲೆಹೂವು (ಅದರಿಂದ ಹೊಡೆದುದರಿಂದ) ಕರ್ಣಾಭರಣವಾಗುವುದಕ್ಕೆ ಬದಲು ರಾಜನಿಗೆ ಮರಣವನ್ನುಂಟುಮಾಡುವ ಆಯುಧವಾಗಿ ಪರಿಣಮಿಸಿತು. ರಾಜನ ನೈದಿಲೆಹೂವಿನ ಹೊಡೆತದಿಂದ ಮೂರ್ಛೆಹೋದವಳು ಸಾಯಲೂಬಹುದಾಗಿತ್ತು. ಅದು ಅಂದು ತಪ್ಪಿತು ಎಂದು ವ್ಯಂಗ್ಯದಮಾತು. ಅಥವ ಹಿಂದಿನ ರಾತ್ರಿಯಲ್ಲಿ ಅಷ್ಟಾವಂಕನೊಡನೆ (ಉಪಪತಿಯೊಡನೆ) ರಾಜನಿಂದ ಸಾವಾಗಬೇಕಾಗಿತ್ತು. ಅವಳ ಸಾವು ಅದೃಷ್ಟವಶದಿಂದ ತಪ್ಪಿತು. ಅದಕ್ಕೆ ಬದಲಾಗಿ ಆಕೆಯ ಕಿವಿಯಾಭರಣ ವಾದ ನೈದಿಲೆಹೂವು ರಾಜನ ಮರಣಕ್ಕೆ ಕಾರಣವಾಯಿತು. (ರಾಜನು ಇವಳ ಕಪಟವನ್ನು ಮೂದಲಿಸಿದನು. ಇದರಿಂದಾಕೆಯು ರಾಜನನ್ನು ಮರುದಿನ ವಿಷದಿಂದ ಕೊಲ್ಲಲು ಸಿಕ್ಷಯಿಸಿದಳು. ಆದುದರಿಂದ ನೈದಿಲೆ ಹೂವು ರಾಜನ ಸಾವಿಗೆ ಆಯುಧದಂತೆ ಮರಣಹೇತುವಾಯಿತು ಎಂದು ಭಾವವು).

೭೦. ಕಳೆದರಾತ್ರಿಯ ದುಷ್ಕೃತ್ಯವನ್ನು ಮೂದಲಿಸುವ ನೆವದಿಂದ ಹೇಳಿದು ದನ್ನು ಕೇಳಿ, ತನ್ನ ದುಷ್ಟಾಚರಣೆಯು ತನ್ನ ಗಂಡನಿಗೆ ತಿಳಿದುಹೋಗಿದೆ ಯೆಂದು ತಿಳಿದ ಆ ವ್ಯಭಿಚಾರಿಣಿ (ಪಾದರಿ) ಯು ಮೂರ್ಛೆಹೋದವಳಂತೆ ಮಲಗಿದ್ದಳು. ಇದನ್ನು ನೋಡಿದ ರಾಜನ ಮನಸ್ಸು ಅತ್ಯಂತವಾಗಿ ಕದಡಿತು. ಮನೋವ್ಯಥೆಯಿಂದ ಕೂಡಿದ ರಾಜನು ಅಲ್ಲಿಂದ ಹೊರಟು ತನ್ನ ತಾಯ ಅರಮನೆಗೆ ಬಂದನು.

|| ಹ ರಿ ಣೀ ||

ಮಗನ ಮೊಗಮಂ ನೀಡುಂ ನೋಡುತ್ತುಮಟ್ಕಿಬಿಳುರ್ಕೆಯಿಂ |
ದುಗುವ ಮೊಲೆವಾಲುಂ ಪುಣ್ಯಸ್ನಾನಾಂಬುವಾಗೆ ಪದಾಬ್ಜದಿಂ ||
ನೆಗಪಿ ಪಲವಪ್ಪಾಶೀರ್ವಾದಂಗಳಿಂದಮುರ್ದಪ್ಪಿ ಜೋ |
ಲ್ದುಗುವ ಕುರುಳಂ ತಿರ್ದುತ್ತುಮಿಂತೆಂದಳಂದಿನ ಭಂಗಿಯಂ || ೭೧

|| ಮಾ ಲಿ ನಿ ||

ಅಭಯರುಚಿಕುಮಾರಂ ಮಾರಿದತ್ತಂಗೆ ಹಿಂಸಾ |
ಶಭಮತಿಗೆ ಸ್ವೈಪಂ ಪೇಳ್ದು ಧರ್ಮಕ್ಕೆ ತಂದೀ ||
ಶುಭಕಥನಮನತ್ಯಾನದದಿಂ ಕೇಳ್ವ ಭವ್ಯ |
ಪ್ರಭುಸಭೆಗೆಸದಿರ್ಕುಂ ಮಂಗಳಶ್ರೀವಿಲಾಸಂ || ೭೨

ಇದು ಪರಮಜಿನಸಮಯಕೌಮುದೀಶರಚ್ಚಂದ್ರಚೈತ್ಯಚಂದ್ರಮ
ಸದಮಳರಾಮಚಂದ್ರಮುನೀಂದ್ರಪದಭಕ್ತಂ
ಜಾನಕಿ ಮಾಡಿದಯಶೋಧರಚರಿತ್ರ
ದೊಳುದಾರಂ ದ್ವಿತೀಯಾ
ವತಾರಂ ||

---

೭೧. ತನ್ನ ಮಗನ ಮುಖವನ್ನು ಚೆನ್ನಾಗಿ ನೋಡುತ್ತಾ, ತನ್ನ ಅಧಿಕವಾದ ಪ್ರೀತಿಯಿಂದವಳಿಗೆ ಉಕ್ಕಿಬಂದ ಮೊಲೆವಾಲೇ (ಸ್ತನ್ಯ) ಪುಣ್ಯಸ್ನಾನಕ್ಕೆ ನೀರಿನಂತಾಗಲು, ಚಂದ್ರಮತಿಯು ತನ್ನ ಪಾದಗಳಮೇಲೆ ನಮಸ್ಕರಿಸಿದ್ದ ಮಗನ ತಲೆಯನ್ನು ಹಿಡಿದೆತ್ತಿ ಕೆದರಿಹೋಗಿದ್ದ ಮುಂಗುರುಳನ್ನು ಸರಿ ಮಾಡುತ್ತ ಅವನ ಮುಖದ (ಉತ್ಸಾಹಗುಂದಿ ಬಾಡಿದ್ದ) ಅಂದಿನ ರೀತಿ ಯನ್ನು ನೋಡಿ ಹೀಗೆಂದು ಹೇಳಿದಳು.

೭೨. ಅಭಯರುಚಿಕುಮಾರನು ಹಿಂಸಾನಂದನಾಗಿದ್ದ ಮಾರಿದತ್ತನಿಗೆ ಪುಣ್ಯಕಥೆಯನ್ನು ಹೇಳಿ ಧರ್ಮಮಾರ್ಗಕ್ಕೆತಂದ ಈ ಶುಭಕಥನವನ್ನು ಸಂತೋಷದಿಂದ ಕೇಳುವ ಭವ್ಯರಾದ ರಾಜರಿಗೂ ಪ್ರಜೆಗಳಿಗೂ ಮಂಗಳವೂ ಸಂಪತ್ತೂ ಉಂಟಾಗುವುವು.

ಇದು ಜಿನಸಮಯ (ಮತ) ವೆಂಬ ಕನ್ನೈದಿಲೆಗೆ ಶರಚ್ಚಂದ್ರ ಚೈತ್ರಚಂದ್ರ
ನಂತಿರುವ ಪರಿಶುದ್ಧರಾದ ರಾಮಚಂದ್ರಮುನೀಂದ್ರ ಪದಭಕ್ತ
ನಾದ ಜಾನಕಿ (ಜನ್ನ) ಯು ರಚಿಸಿದ ಯಶೋಧರ
ಚರಿತ್ರೆಯ ಕರ್ಣಾಟಕಾನುವಾದದಲ್ಲಿ
ಎರಡನೆಯ ಅವತಾರವು.

ಶ್ರೀ

# ತೃತೀಯಾವತಾರಂ

|| ಕಂದ ||

ಶ್ರೀರಮಣಿ ತೋರಮುತ್ತಿನ |
ಹಾರದೊಳೊಲೆದುಯ್ಯಲಾಡೆ ನಿತ್ಯವಸಂತಂ ||
ಪೇರುರಮಾಗಿರೆ ತಾಳ್ದಿದ |
ರಾರೊ ಯಶೋಧರನೃಪೇಂದ್ರ ನೀನಲ್ಲದವರ್ || ೧

ನಿನಗೆ ಶುಭವೆಂದ ವಂದಿಯ |
ಮನೆಯಂಗಣದೊಳಗೆ ಪಣ್ತು ಪರ್ವಿದ ಮಂದಾ ||
ರನಮೇರುಪಾರಿಜಾತದ |
ಬನದೊಳ್ಸಿರಿ ಮೆಱೆವುದಲ್ತೆ ವನಕೇಳಿಗಳಂ || [ಕಾವ್ಯಾರ್ಥಾಪತ್ತಿ] ೨

ಮನಸಿಜನ ಕಲ್ಪಲತಾನಂ |
ದನಮೆನೆ ಬಿಂಬಕ್ಕೆ ಕೊಂಕಿದಬಳಾಜನಮಂ ||
ನನೆಕೊನೆವೋಗಿಸುತಿರ್ಪುದು |
ಮನುಜಮನೋಭವ ಭವದ್ವಿಳಾಸವಸಂತಂ || ೩

---

|| ತಾತ್ಪರ್ಯ ||

೧. "ಎಲೆ ಯಶೋಧರರಾಜೇಂದ್ರ ! ಲಕ್ಷ್ಮಿಯು ಯಾವಾಗಲೂ ತನ್ನ ವಿಶಾಲವಾದ ಎದೆಯಲ್ಲಿನ ಮುತ್ತಿನಹಾರದಮೇಲೆ ಉಯ್ಯಾಲೆಯಾಡು ತ್ತಿರುವಂತೆ ರಾಜ್ಯವನ್ನು ಧರಿಸಿರುವವರು ನೀನಲ್ಲದೆ ಮತ್ತಾರು ? ಯಾರೂ ಇಲ್ಲವೆಂದರ್ಥ (ಯಾವಾಗಲೂ ಸಂಪತ್ಸಮೃದ್ಧನಾಗಿ ರಾಜ್ಯವಾಳುತ್ತಿರುವ ನೆಂದು ಭಾವವು).

೨. ಎಲೆ ರಾಜನೆ ! ನಿನಗೆ ಶುಭವುಂಟಾಗಲೆಂದು ಹರಸಿ ಪಾಡುವ ನಿನ್ನ ವಂದಿಜನಗಳ ಮನೆಯ ಅಂಗಳದಲ್ಲಿ ಫಲನಮ್ರವಾದ ಇಂದ್ರಲೋಕದ ಪಾರಿಜಾತದವನದಲ್ಲಿ ಲಕ್ಷ್ಮಿಯು ಕೇಳಿಗಳನ್ನಾಡುತ್ತಿರುವಳು. (ರಾಜನ ಮಂಗಳಪಾಠಕರೇ ದೇವೇಂದ್ರವೈಭವದಿಂದ ಸುಖಿಗಳಾಗಿರುವರು.ಸೇವಕರೇ ಸರ್ವಸಂಪತ್ತಿನಿಂದ ಕೂಡಿರುವರೆಂದಮೇಲೆ ಒಡೆಯನ ಐಶ್ವರ್ಯವೆಷ್ಟೆಂದು ವರ್ಣಿಸಬಹುದು? ಆತನು ಅಪರಿಮಿತೈಶ್ವರ್ಯಶಾಲಿಯೂ, ಅತ್ಯಂತ ಉದಾರಿಯೂ ಆಗಿದ್ದನೆಂದು ಭಾವವು).

೩. ನಿನ್ನರೂಪಿಗೆ ಮನಸೋತ ಮನ್ಮಥನ ಕಲ್ಪಲತೆಗಳುಳ್ಳ ನಂದನವನ

ಬಳೆಗೋದುದು ಕೀರ್ತಿ ದಿಶಾ |
ಕಳಭಂಗಳ ನಿಗ್ಗವಂಗಳೊಳ್ ರಿಪುಕಾಂತಾ ||
ವಳಿಯನೆ ಭವತ್ಪ್ರತಾಪಂ |
ಬಳೆಗಳೆಯಿಸೆ ತಾನದಕ್ಕೆ ಮಚ್ಚರಿಸುವವೋಲ್ || ೪

ಉದಧಿಪರಿಯಂತಮೆಳೆಯೊಳ |
ಗೊದವಿದ ನಿನ್ನಾಜ್ಞೆ ಮಣಿಕಿರೀಟಂಗಳ ನೀ ||
ಟ್ಟೊದೆದುರುಳೆ ನೂಂಕಿ ಕುಳ್ಳಿ |
ರ್ದುದು ನೆತ್ತಿಯ ಮೇಲೆ ಸಕಲಭೂಪಾಲಕರಾ || ೫

ಕೊಱತೆ ನಿನಗಿಲ್ಲದೇಕೆಂ |
ದಱಿಯೆಂ ನೀರೋಡಿ ನಿನ್ನ ತನುವಿನ ಬಣ್ಣಂ ||
ಬಱಿಗೊಳದವೊಲಾಯ್ತೀಕ್ಷಿಸಿ |
ಮಱುಗಿದುದಱುನೀರ ಮೀಂಬೊಲಿಂದೆನ್ನ ಮನಂ || ೬

---

ದಂತಿರುವ ಸ್ತ್ರೀಯರ ಸಮೂಹವೆಂಬ ಲತೆಗಳನ್ನು ಮನುಷ್ಯರೂಪದ ಮನ್ಮಥ ನಂತಿರುವ ನಿನ್ನ ಸೌಂದರ್ಯವಿಲಾಸವೆಂಬ ವಸಂತನು ವೃದ್ಧಿಗೊಳಿಸುತ್ತಿರುವನು (ಅವನು ಭುವನಮೋಹಕನಾಗಿದ್ದನೆಂದು ಭಾವವು).

ನಿನ್ನ ಅಸದೃಶಪರಾಕ್ರಮವು ಶತ್ರುರಾಜರ ಹೆಂಡತಿಯರ ಬಳೆಗಳನ್ನು ಕಳೆದುಹಾಕುವಹಾಗೆ ಮಾಡಲು (ಶತ್ರುರಾಜರನ್ನು ನೀನು ಸಂಹರಿಸಿದುದರಿಂದ ವಿಧವೆಯರಾದ ರಾಣಿಯರು ಬಳೆಗಳನ್ನು ಕಳೆಯಲು) ಅದನ್ನು ನೋಡಿ ಮತ್ಸರಗೊಂಡು (ಎಂದರೆ, ರಾಜನೆ! ನೀನು ಕೆಲವರ ಬಳೆಗಳನ್ನು ಕಳೆದುಹಾಕಿಸಿದೆ; ನಾನು ಕೆಲವರಿಗೆ ಬಳೆಗಳನ್ನು ತೊಡಿಸುವೆನು ಎನ್ನುವಂತೆ) ನಿನ್ನ ಕೀರ್ತಿಯು ದಿಗ್ಗಜಗಳ ಕೊಂಬುಗಳಿಗೆ ಸುತ್ತಿಕೊಂಡು ಬಳೆದೊಡಿಸಿದಂತೆ ಮಾಡಿತು. (ಅವನು ಶತ್ರುರಾಜರನ್ನೆಲ್ಲಾ ಜಯಿಸಿದ್ದನು, ಅವನ ಕೀರ್ತಿಯು ದಿಶಾಂತ್ಯದವರೆಗೂ ವ್ಯಾಪಿಸಿದ್ದಿತೆಂದು ಭಾವವು).

೫. ಸಮುದ್ರಪರ್ಯಂತರ ಭೂಮಿಯಲ್ಲೆಲ್ಲಾ ವ್ಯಾಪಿಸುವ ನಿನ್ನಾಜ್ಞೆಯು ಸಮಸ್ತರಾಜರ ರತ್ನಕಿರೀಟಗಳನ್ನು ಒದೆದು ಉರುಳಿಸಿತಳ್ಳಿ ಆವುಗಳ ಸ್ಥಾನದಲ್ಲಿ ಎಂದರೆ ಅವರ ನೆತ್ತಿಯಮೇಲೆ ಕುಳಿತಿರುವುದು (ಸಕಲಭೂಪಾರಲಕೂ ನಿನ್ನಾಜ್ಞೆಯನ್ನು ಶಿರಸಾವಹಿಸಿ ನಡೆಸುತ್ತಿರುವರು ಎಂದು ಭಾವವು).

೬, ಯಾವಭಾಗದಲ್ಲೂ ಕೊರತೆಯು ನಿನಗಿಲ್ಲ, ಹೀಗಿದ್ದರೂ ಏಕೆ ಇಂದು ನಿನ್ನ ಮೈಬಣ್ಣವು ಕಾಂತಿಹೀನವಾಗಿ ನೀರಿಲ್ಲದ ಕೊಳದಂತಾಗಿದೆಯೋ

ಮಂದಸ್ಮಿತವರಕೌಮುದಿ ।
ನಿಂದುದು ಮೃಗನಾಭಿತಿಳಕಲಕ್ಷ್ಮದ ಪೊಳಪಿ ॥
ಲ್ಲಿಂದೇಕೆ ಕಂದ, ಪಗಲೊಗೆ ।
ದಿಂದುವಿನಂತಾಯ್ತು ನಿನ್ನ ಮಂಗಲವದನಂ ॥ ೭

ಎಂದು ಬೆಸಗೊಂಡ ತಾಯ್ಗೆ ಮು ।
ನಂದೋಱದೆ ನೆವದಿನರಸನಿಂತುಸಿರ್ದಂ ಸು ॥
ಯ್ಯಂದಿಸಿದಧರಕ್ಕೆ ಸುಧಾ ।
ಬಿಂದುಗಳಂ ತಳಿಯೆ ದಂತಕಾಂತಿಪ್ರಸರಂ ॥ ೮

ದೇವಿಯರ ಪರಕೆಯಿಂದೆನ ।
ಗಾವುದಱೊಳ್ ಕೊಱತೆಯಿಲ್ಲ ಪೋದಿರುಳೊಳ್ ಪೊಂ ॥
ದಾವರೆಗೊಳದಂಚೆ ಕನ ।
ಲ್ದಾವಲ್ಗೊಳದೊಳಗೆ ನಲಿವ ಕನಸಂ ಕಂಡೆಂ ॥ ೯

---

ನನಗೆ ತಿಳಿಯದು. ನಿನ್ನನ್ನು ನೋಡಿ ನೀರು ಬತ್ತಿಹೋಗುತ್ತಿರುವ ಕೆರೆಯಲ್ಲಿನ ಮೀನಿನಂತೆ ನನ್ನ ಮನಸ್ಸು ಅತ್ಯಂತದುಃಖಪಡುತ್ತದೆ.

೭. ಸದಾ ಹಸನ್ಮುಖಿಯಾಗಿದ್ದ ನಿನ್ನ ನಗುವೆಂಬಬೆಳದಿಂಗಳಿಂದು ಮರೆಯಾಗಿವೆ. ಹಣೆಯಲ್ಲಿ ಶೋಭಿಸುತ್ತಿರಬೇಕಾದ ಕಸ್ತೂರಿತಿಲಕವಿಂದು ಹೊಳೆಯುತ್ತಿಲ್ಲ. ಎಲೆ ಮಗನೆ! ಹಗಲುಹುಟ್ಟಿರುವ ಚಂದ್ರನಂತೆ ನಿನ್ನ ಮಂಗಲವದನವೇಕೆ ಕಳೆಗುಂದಿದೆ? ಎಂದು ತಾಯಿ ಚಂದ್ರಮತಿಯು ಮಗನನ್ನು ಪ್ರಶ್ನೆಮಾಡಿದಳು.

೮. ಹೀಗೆಂದು ಪ್ರಶ್ನೆಮಾಡಿದ ತಾಯಿಗೆ ಯಶೋಧರನು, ಅವನ ದಂತಕಾಂತಿಯು ನಿಟ್ಟುಸಿರಿನಿಂದ ಕಂದಿದ್ದ ತುಟಿಗಳಿಗೆ ಅಮೃತಬಿಂದುಗಳನ್ನೆರೆಯುವಂತೆ, ತನ್ನ ಮನಸ್ಸಿನ ದುಃಖವನ್ನು ತೋರಿಸದೆ ಮರೆಮಾಚಿ ಹೀಗೆಂದು ಹೇಳಲುಪಕ್ರಮಿಸಿದನು (ಮಾತನಾಡಲುದ್ಯತನಾದವನ ದಂತಕಾಂತಿಯು ನಿಟ್ಟುಸುರುಗಳಿಂದ ಕಂದಿದ್ದವನ ಅಧರಗಳಿಗೆ ಅಮೃತಬಿಂದುಗಳನ್ನು ಸೇಚನೆಮಾಡುವಂತೆ ತೋರುತ್ತಿದ್ದಿತು).

೯. "ತಾಯಿ! ತಮ್ಮ ಆಶೀರ್ವಾದಬಲದಿಂದ ನನಗೆ ಇದುವರೆಗೂ ಯಾವುದರಲ್ಲಿಯೂ ಕೊರತೆಯಿಲ್ಲ. ಕಳೆದರಾತ್ರಿಯಲ್ಲಿಮಾತ್ರ ತಾವರೆಕೊಳದಲ್ಲಿ ಆಡುವ ಹಂಸೆಯೊಂದು ಕೋಪದಿಂದ ಆವಲುಹೂಗಳಿರುವ (ಅಲ್ಪವಾದನೀರಹೂ) ಕೊಳದಲ್ಲಿ ವಿಹರಿಸುತ್ತಿರುವ ಕನಸೊಂದನ್ನು ಕಂಡೆನು."

ಗೋದಾವೆಗಂಡ ನವಿಲಂ ।
ತಾದುದು ಕಾರ್ಗಂಡ ಹಂಸನವೊಲಾದುದಲ ॥
ವೊರ್ದಿದ ಲತೆಗಂಡ ವಿರಹಿವೊ ।
ಲಾದುದು ದುರ್ನಯದ ಕಾಣ್ಕೆಗೆನ್ನಯ ಚಿತ್ತಂ ॥ ೧೦

ವನಿತೆಯಕೇಡಂ ಜನಪತಿ ।
ಕನಸಿನ ನೆವದಿಂದಮಱಿಪೆ ತಲ್ಲಣದಿಂ ತಾಯ್ ॥
ನೆನೆದಳ್ವೊಲ್ಲಮೆಯಂ ವಂ ।
ಚನೆಯೆಲ್ಲಿಯುಮೊಳ್ಪಮಾಡಲಾಱದು ಕಡೆಯೊಳ್ ॥ ೧೧

ಅಡಸಿದ ನಲ್ಲಳ ತಪ್ಪಂ ।
ತಡವಿಕ್ಕಿದೊಡೇೞುಭವದ ಕೇಡಡಸುವ ಕಿ ॥
ಱ್ನುಡಿಯಂ ನುಡಿದಳ್ ತಾವೊಂ ।
ದಡಸಿದೊಡೇೞಡಸಿತೆಂಬ ನುಡಿ ತಪ್ಪುಗುಮೇ ॥ ೧೨

---

೧೦. "ಆ ಅಶುಭಸೂಚಕವಾದ ಕನಸನ್ನು ನೋಡಿದ್ದರಿಂದೆನ್ನ ಮನಸ್ಸು ಗೋಸುಂಬೆಯನ್ನು (ಉಡುವಾದರೂ ಆಗಬಹದು) ನೋಡಿದ ನವಿಲಿನಂತೆಯೂ, ಕಾರ್ಗಾಲದ (ಕಾರ್ಮುಗಿಲ ಕಾಲದ) ಸಿಡಿಲಧ್ವನಿಯನ್ನು ಕೇಳಿದ ಹಂಸೆಯಂತೆಯೂ, ಹೂಬಿಟ್ಟಿರುವ ಲತೆಯನ್ನು ನೋಡಿದ ವಿರಹಿಯಂತೆಯೂ, ಅತ್ಯಂತಕ್ಲೇಶಕ್ಕೀಡಾಗಿದೆ." ಎಂದು ಉತ್ತರ ಹೇಳಿದನು.

೧೧. ತನ್ನ ಹೆಂಡತಿಯ ದುಷ್ಕಾರ್ಯವನ್ನು (ತಾವರೆಹೂವಿನಂತೆ ಮನೋಹರನಾಗಿದ್ದ ತನ್ನನ್ನು ಬಿಟ್ಟು ತನ್ನ ರಾಣಿಯು ಆವಲಹೂವಿನಂತೆ ಕ್ಷುದ್ರನಾದ ಮಾವುತನಲ್ಲಿ ರಮಿಸಿದುದನ್ನು) ಕನಸುಕಂಡೆನೆಂಬ ನೆಪಮಾಡಿ ಹೇಳಿದ ಮಗನ ಮಾತಿಗೆ ತಾಯಿ ಚಂದ್ರಮತಿಯು ನಡುಗುತ್ತಾ ಮಗನ ಅಶುಭಪರಿಹಾರಕ್ಕೆಂದೊಂದು ಕೆಟ್ಟಯೋಚನೆಮಾಡಿದಳು. ವಂಚನೆಯು ಕೊನೆಯಲ್ಲೆಂದೂ ಒಳ್ಳೆಯದನ್ನು ಮಾಡಲಾರದಲ್ಲವೇ ?

೧೨. ಗಾಢವಾಗಿ ತನ್ನಲ್ಲಿ ಸೇರಿದ್ದ ಹೆಂಡತಿಯ ಅಂದಿನ ತಪ್ಪನ್ನು ಮಾರ್ಪಡಿಸಿ ಹೇಳಿದ್ದಕ್ಕೆ ತಾಯಿಯು ಏಳೇಳುಜನ್ಮಗಳವರೆಗೂ ಕೆಟ್ಟಫಲವಾಗುವಂತಹ ದುಷ್ಟವಾದ ಮಾತೊಂದನ್ನು ಹೇಳಿದಳು. ಒಂದಡಸಿದರೆ ಏಳು ಉಂಟಾಗುವುದು (ಒಂದುಬಾರಿ ಕೇಡುಂಟಾದರೆ ಅದು ಏಳುಬಾರಿಯವರೆಗೂ ಉಂಟಾಗುತ್ತಿರುತ್ತದೆ. ಇದು ಜನರು ತಮಗೆ ಬೇಡವಾದುದನ್ನು "ಏಳೇಳುಜನ್ಮಕ್ಕೂ ಬೇಡ" ಎಂದು ಹೇಳುವ ವಾಡಿಕೆಯಂತೆ) ಎಂಬ ನಾಣ್ನುಡಿಯು ತಪ್ಪುವುದೇ ?

ದೇವ ಕನಸಿದು ಕರಂ ದೋ |
ಷಾವಹಮಿಱಿಕೆಯ್ಯಲಾಗ ನಿನ್ನಸಿಮುಖದಿಂ ||
ದಾವಣಿಗುಱಿಯಂ ತಱಿದೊಡೆ |
ದೇವಿ ಶುಭೇತರವಿನಾಶಮಂ ದಯೆಗೆಯ್ಗುಂ || ೧೩

ಮುಂತಱಿಪೆ ತಾಯ ವಚನದೊ |
ಳಂತೆ ಶುಭೇತರವಿನಾಶಶಬ್ದಮಿಳೇಶಂ ||
ಗೆಂತುಂ ಪಾಪಮೆನುತ್ತುಂ |
ಶಾಂತಮನಂ ಪೇಸಿ ಮುಚ್ಚಿಕೊಂಡಂ ಕಿವಿಯಂ || ೧೪

ವೇಗಂ ಬಗೆವೊಡೆ ವಧೆ ಹಿತ |
ಮಾಗದು ಮರ್ತ್ಯಂಗೆ ನಿಟ್ಟಿಯೇ ಮಾನಸವಾ ||
ಟೀಗಳೋ ಮೇಣಾಗಳೊ ಮೇಣ್ |
ಸಾಗುದುರಿಗೆ ಪುಲ್ಲನಡಕಿ ಕೆಡುವನೆ ಚದುರಂ || ೧೫

---

೧೩. "ಎಲೆ ದೇವನೆ! (ಮಗನಾದರೂ ರಾಜನೆಂಬುದರಮೇಲೆ ದೇವನೆಂದು ಸಂಬೋಧಿಸಿದ್ದಾಳೆ) ಈ ಕನಸು ಕೇಡನ್ನುಂಟುಮಾಡತಕ್ಕದ್ದು; ಅದನ್ನು ಉದಾಸೀನಮಾಡಲಾಗದು. ನಿನ್ನ ಕೈಕತ್ತಿಯಿಂದಲೇ ಮಾರಿದೇವತೆಗೆ ಒಂದುಸಾಲು ಕುರಿಯನ್ನು ಬಲಿಕೊಟ್ಟರೆ, ಆ ದೇವತೆಯು ತೃಪ್ತಿಹೊಂದಿ ಈ ಅಶುಭವನ್ನು ನಾಶಮಾಡಿ ಅನುಗ್ರಹಿಸುವಳು" ಎಂದು ತಾಯಿ ಮಗನಿಗೆ ಹೇಳಿದಳು.

೧೪. ಹೀಗೆ ತಿಳಿಸಿದ ತಾಯಿಯ ಮಾತಿನ "ಅಶುಭವಿನಾಶಕರ"ವೆಂಬ ಶಬ್ದವು ಹೇಗೂ ಪಾಪಕರವಾದುದೆಂದು ಯೋಚಿಸಿ, ಆ ಶಾಂತಮನಸ್ಕನಾದ ರಾಜನು ಅಸಹ್ಯತೆಯಿಂದ ಕಿವಿಗಳನ್ನು ಮುಚ್ಚಿಕೊಂಡನು (ಕೆಟ್ಟ ಮಾತುಗಳನ್ನು ಕೇಳಬಾರದೆಂದು).

೧೫. ಮತ್ತೆ ತಾಯಿಯನ್ನು ಕುರಿತು "ವೃದ್ಧಿಹೊಂದಬೇಕೆಂದರೆ (ಒಳ್ಳೆಯದಾಗಬೇಕೆಂದರೆ) ಕೊಲ್ಲುವುದು ಮನುಷ್ಯನಿಗೆ ಎಂದೂ ಹಿತವಾಗುವುದಿಲ್ಲ. ಹಾಗಾದರೆ, ಹೀಗೆ ಕೊಲ್ಲುವ ಮನುಷ್ಯನ ಜೀವಿತವೇನು ಸ್ಥಿರವೇ ಇಂದೋ ನಾಳೆಯೋ (ಬಲ್ಲವರಾರು) ? ಬುದ್ಧಿವಂತನಾದವನು ಸಾಯುವುದೆಂದು ಗೊತ್ತಾಗಿರುವ ಕುದುರೆಗೆ ಹುಲ್ಲನ್ನು ಹಾಕಿ ಕೆಡುವನೇ ? (ವ್ಯರ್ಥಮಾಡುವನೇ)."

ಇವು ಧರ್ಮಮೆಂದು ಬಗೆವೊಡ |
ಮವಿವೇಕದೆ ಶಾಂತಿಮಾಡೆ ಬೇತಾಳಂ ಮಾ ||
ಡುವ ತೆಱದೆ ಹಿಂಸೆಯುಂ ಮಾ |
ಡುವ ಮುಂತಣ ಕೇಡನೆಂತು ಕಱಿವೆಂ ಬಱಿಯಂ || ೧೬

ಜೀವದಯೆ ಜೈನಧರ್ಮಂ |
ಜೀವಹಿತಂ ನಂಬುವವರ್ಗೆ ಹಿಂಸೆಯಮೋಘಂ ||
ಭಾವಿತವೆ ತಪ್ಪಿನುಡಿದಿರ್ |
ಕಾವರೆ ಕಣೆಗೊಳ್ವೊಡಬ್ಬೆ ಬಾರಿಪರೊಳರೇ || ೧೭

ಎಂದೊಡೆ ಮುನಿದಂಬಿಕೆಯಿಂ |
ತೆಂದಳ್ ನಿಜಮಪ್ಪಮೋಹದಿಂ ಸಲುಗೆಯಿನೆ ||
ಯ್ತಂದಳ್ನಾಡೆ ನೃಪೇಂದ್ರನ |
ಮುಂದಣಗತಿಗಪ್ಪ ಬಟ್ಟೆಯಂ ಕಟ್ಟುವವೋಲ್ || ೧೮

---

೧೬. "ಹೀಗೆ ಜೀವವಧೆಮಾಡುವುದು ಧರ್ಮವೆಂದು ತಿಳಿದುಕೊಂಡರೂ, ಮತ್ತೆ ಆ ಜೀವವಧೆಯನ್ನೇ ಶಾಂತಿಯೆಂದು ಮಾಡಿದರೂ, ಬೇತಾಳನು ಬೆನ್ನಹತ್ತಿಬರುವಂತೆ, ಆ ಜೀವವಧೆಯಿಂದ ಬೆನ್ನಲ್ಲೇ ಬರುವ ಮುಂದಣ ವಿಪತ್ತನ್ನು (ಪಾಪದ ದುಷ್ಫಲವನ್ನು) ಬಳಿಕ ಪರಿಹರಿಸಿಕೊಳ್ಳುವುದು ಹೇಗೆ ?"

೧೭. "ಜೀವದಯೆಯೇ ಜೈನಧರ್ಮ. ಜೀವಹಿತವೇ ಧರ್ಮವೆಂದು ನಂಬಿರುವವರು ಹಿಂಸೆಯು ಸಾರ್ಥಕ (ವ್ಯರ್ಥವಾದುದಲ್ಲ) ವೆಂದು ಭಾವಿಸ ಬಹುದೆ ? ಅಮ್ಮಾ ! ತಾವು ತಪ್ಪಾಗಿಹೇಳಿದಿರಿ. ಸಂರಕ್ಷಣೆಮಾಡುವವರೇ ಕಣೆಗೊಂಡರೆ (ಪ್ರಾಣವನ್ನು ಹಿಂಡಿದರೆ ಎಂದರೆ ಕೊಲ್ಲಲು ಯತ್ನಿಸಿದರೆ) ತಪ್ಪಿಸುವರಾರು ? ಎಂದುತ್ತರಹೇಳಿದನು.

೧೮. ಮಗನು ಹೀಗೆಂದು ಹೇಳಿದೊಡನೆಯೇ, ತಾಯಿಯು ಕೋಪಗೊಂಡು ಆ ಮಗನಲ್ಲಿ ತನಗಿದ್ದ ನಿಜವಾದ ಪ್ರೀತಿಯಿಂದಲೂ, ಸಲುಗೆಯಿಂದಲೂ (ಸೌಜನ್ಯ) ಹೀಗೆ ಹೇಳಿದ ಅವಳು, ಮುಂದೆ ರಾಜನಿಗೆ ಉಂಟಾಗಲಿರುವ ಗತಿ (ಸದ್ಗತಿ) ಯ ಮಾರ್ಗಕ್ಕೆ ಅಡ್ಡಿಬರುತ್ತಿರುವಳೊ ಎಂಬಂತೆ ಆಯಿತು. ಆಕೆಯು ತನ್ನ ಮಾತನ್ನು ಹೀಗೆ ಮುಂದುವರಿಸಿದಳು.

ಪರಿಹರಿಪೆಯೆಮ್ಮ ನುಡಿಯಂ ।
ಗುರುವಚನಮಲಂಘನೀಯಮೆನ್ನದೆ ನೀನಾ ॥
ದರದಿಂ ಕೈಕೊಳ್ ಧರ್ಮದೊ ।
ಳರಸುಗಳೇಂ ಶಾಂತಿಯೆಂದೊಡನುಸರಿಸರೆ ಪೇಟ್ ॥ ೧೯

ಆದೊಡೆ ಪಿಟ್ಟಿನ ಕೋಟಿಯ ।
ನಾದರದಿಂದೊಂದನಿಕ್ಕವೇಟ್ಟುದು ಮಿಕ್ಕಂ ॥
ದಾ ದೇವಿಗೆನ್ನನಿಕ್ಕಿಯು ।
ಮಿಾ ದುರಿತಮನಿಂದು ಮಗನೆ ಪರಿಹರಿಸದಿರೆಂ ॥ ೨೦

ಎನೆ ತಾಯ ಮೋಹದಿಂದಂ ।
ಜನಪನೊಡಂಬಟ್ಟು ಮನದೊಳಿಂತೆಂದಂ ಭಾ ॥
ವನೆಯಿಂದಮಪ್ಪುದಾಸ್ರವ* ।
ಮೆನಗಿನ್ನೆಂತಪ್ಪ ಪಾಪಮಿದಿರ್ವಂದಪುದೋ ॥ ೨೧

---

೧೯. "ಎಲೆ ಮಗನೆ! 'ದೊಡ್ಡವರ ಮಾತನ್ನು ಮಿಾರಲಾಗದು' ಎಂದು ಯೋಚಿಸದೆ ನಮ್ಮ ಮಾತನ್ನು ತಿರಸ್ಕರಿಸುತ್ತಿರುವೆ. ನೀನು ಆದರಿಸಿ ನನ್ನ ಮಾತನ್ನು ಅಂಗೀಕರಿಸಬೇಕು. ರಾಜರು ಧರ್ಮವಿಷಯಗಳಲ್ಲಿ ಶಾಂತಿಯುಂಟಾಗುವ ಕ್ರಿಯೆಗಳನ್ನು ಅನುಸರಿಸುವುದಿಲ್ಲವೆ? ಹೇಳು-"

೨೦. ಹಾಗೆ ಜೀವವಧೆಯನ್ನು ಮಾಡುವುದು ನಿನಗೊಪ್ಪದಿದ್ದರೆ, ಹಿಟ್ಟಿನಲ್ಲಿ ಮಾಡಲ್ಪಟ್ಟೊಂದು ಕೋಳಿಯನ್ನಾದರೂ ಶ್ರದ್ಧೆಯಿಂದ ದೇವತೆಗೆ ಬಲಿಗೊಡಬೇಕು. ನೀನು ಹಾಗೆಮಾಡದೇ ಹೋಗುವೆಯಾದರೆ, ನಾನು ನನ್ನನ್ನೇ ದೇವಿಗೆ ಬಲಿಗೊಟ್ಟು ನಿನಗುಂಟಾಗುವ ಅಶುಭವನ್ನು ಪರಿಹರಿಸದಿರೆನು" ಎಂದುತ್ತರಕೊಟ್ಟಳು.

೨೧-೨೨. ಹೀಗೆಂದು ಹೇಳಿದ ತಾಯಿಯ ಖಂಡಿತವಾದ ಮಾತನ್ನು ಕೇಳಿ ಅವಳ ಮೇಲಿನ ಮಮತೆಯಿಂದವಳ ಮಾತಿಗೊಪ್ಪಿಕೊಂಡು ತನ್ನ ಮನಸ್ಸಿನಲ್ಲಿ "ಭಾವನೆಯಿಂದಲೇ ಕರ್ಮಗಳು ಬಂದು ಸೇರುತ್ತವೆ. ಕೊಲ್ಲುವೆನೆಂಬ ಭಾವನೆಯೇ ಪಾಪಾಸ್ರವಕ್ಕೆ ಕಾರಣವಾಗುತ್ತದೆ. ಈಗ ಈ ಮಾತಿಗೊಪ್ಪಿಕೊಂಡ ನನಗೆ ಎಂತಹ ಪಾಪವೆದುರಾಗುವುದೋ? ಕಾಣೆನು. ತಾಯಿ ಹೇಳಿದಂತೆ ಮಾಡದೇಹೋದರೆ ತಾನೇ ಸಾಯುವೆನೆನ್ನುವಳು, ಮಾಡಿದರೆ ಮುಂದಿನ ಜನ್ಮದ ಗತಿಗೆ ಕೇಡುಬರುತ್ತದೆ. ಮಾಡುವುದೇ ಬಿಡುವುದೇ ಎಂದು ಮನಸ್ಸು ಹಿಂದಕ್ಕೂ ಮುಂದಕ್ಕೂ ಉಯ್ಯಾಲೆಯಂತೆ

---

* ಮನಸ್ಸಿನ ಶುಭಾಶುಭ ಪರಿಣಾಮಕ್ಕೆ ತಕ್ಕಂತೆ ಕರ್ಮಾಣುಗಳು ಆತ್ಮಪ್ರದೇಶದಲ್ಲಿ ಬಂದು ಸೇರುವಿಕೆಗೆ "ಆಸ್ರವ" ವೆಂದು ಹೆಸರು.

ಮಾಡದೊಡೆ ತಾಯ್ಗೆ ಮರಣಂ ।
ಮಾಡಿದೊಡೆನ್ನೊಂದು ಗತಿಗೆ ಕೇಡುಮುದೇನಂ ॥
ಮಾಡುವೆನೆಂದಾಂದೋಳಮು ।
ನಾಡೆ ಮನಂ ತಮುಮನಪ್ಪುಕೆಯ್ದನಿಳೇಶಂ ॥ ೨೨

ಆ ನೃಪತಿ ಬಟಿಕ ತಾಯುಂ ।
ತಾನುಂ ಚಂಡಿಕೆಯ ಪೂಜೆಗೆಟ್ಟಿಂದಂ ॥
ನಾನಾವಿಧದರ್ಚನೆಯಿಂ ।
ಮಾನೋಮಿಯ ಮುಂದೆ ಬಂದ ಭೌಮಾಷ್ಟಮಿಯೊಳ್ ॥ ೨೩

ಕರಮೆಸೆಯೆ ಸಮೆದು ಬಂದುದು ।
ಚರಣಾಯುಧಮುದಱ ಚಿತ್ರಪರಿಶೋಭೆಗೆ ಬೆಂ ॥
ತರನೊಂದಾಶ್ರಯಿಸಿರ್ದುದು ।
ಪರಸಿದಳುಗ್ಗಡಿಸಿ ಜನನಿ ಪುತ್ರಂ ಪೊಯ್ದಂ ॥ ೨೪

ತಲೆಯಿಂ ಕುಕ್ಕೂಕೂಯೆಂ ।
ಬುಲಿ ನೆಗೆದುದು ಕೂಗಿ ಕರೆವ ದುರಿತಂಗಳ ಬ ॥
ಲ್ಲುಲಿಯೆನೆ ಪಿಟ್ಟಿನ ಕೋೞಿಯ ।
ತಲೆ ಮಿಡಿವಂತಾಗಿರಟ್ಟಿ ಪಾಱಿದುದಿನಿಸುಂ ॥ ೨೫

---

ಓಲಾಡುತ್ತಿದ್ದಿತಾದರೂ, ಕೊನೆಗೆ ರಾಜನು ತಾಯಿಯ ಮಮತೆಯನ್ನೇ ಮೇಲಾಗಿಭಾವಿಸಿ, ಕೆಟ್ಟದ್ದನ್ನೇ ಒಪ್ಪಿಕೊಂಡನು.

೨೩. ಅನಂತರ ರಾಜನು, ತಾಯೊಡನೆ ನಾನಾವಿಧವಾದ ಪೂಜಾದ್ರವ್ಯಗಳ ಸಹಿತ ಚಂಡಿಕೆಯ ಪೂಜೆಗಾಗಿ ಮಹಾನವಮಿ (ಆಶ್ವಯುಜ ಮಾಸದ ಶುಕ್ಲ ಪಕ್ಷದ ನವಮಿ) ಗಿಂತ ಮೊದಲು ಬಂದ, ಮಂಗಳವಾರದಿಂದ ಕೂಡಿದ, ಅಷ್ಟಮಿಯಂದು ಬಂದನು.

೨೪. ಅವರ ಹಿಂದೆಯೇ ಮನೋಹರವಾಗಿರುವಂತೆ ಮಾಡಲ್ಪಟ್ಟೊಂದು ಕೋಳಿಯು ತರಲ್ಪಟ್ಟಿತು. ತರುವದಾರಿಯಲ್ಲಿ ಆ ಹಿಟ್ಟಿನಕೋಳಿಯ ಮನೋಹರತೆಗೆ ಬೆರಗಾದ ವ್ಯಂತರನೊಂದು (ಒಂದುಬಗೆಯ ಪಿಶಾಚಿ) ಬಂದು ಅದನ್ನಾಶ್ರಯಿಸಿ ಸೇರಿತು. ರಾಣಿ ಚಂದ್ರಮತಿಯು ಮಗನನ್ನು ಗಟ್ಟಿಯಾಗಿ ಹರಸಿದಳು, ಮಗನು ಆ ಕೋಳಿಯ ಮೂರ್ತಿಯನ್ನು ಕತ್ತರಿಸಿದನು.

೨೫. ಕತ್ತರಿಸಿದೊಡನೆಯೇ (ಆಶ್ರಯಿಸಿದ್ದ ವ್ಯಂತರನ ಸಾಮರ್ಥ್ಯದಿಂದ)

ಪೊಡೆಯೆ ಕೃಕವಾಕುನಿನದಂ ।
ಬಿಡದುಣ್ಮುತಿರಲ್ಕೆ ಕೆಯ್ಯ ಬಾಳ್ ಬೀೞ್ತರೆ ಪೊ ॥
ಯ್ವಡೆದಂತೆ ಪಂದೆಯಂ ಪಾ ।
ವಡರ್ದಂತಾಗಿರೆ ಯಶೋಧರಂ ಬೆಱಗಾದಂ ॥ ೨೬

ಏಕೆ ಕನಸೆಂದು ನುಡಿದೆನಿ ।
ದೇಕಂಬಿಕೆ ಬಲಿಯನೊಡ್ಡಿದಳ್ ಕೂಗಿದುದೇ ॥
ಕೀ ಕೃತಕತಾಮ್ರಚೂಡನಿ ।
ದೇಕೆಂದಾರಱಿವರಯ್ಯ ವಿಧಿವಿಳಸನಮಂ ॥ ೨೭

ಅಮೃತಮತಿಯೆಂಬ ಪಾತಕಿ ।
ಯ ಮಾಯೆ ಬನಮಾಯ್ತು ಚಂದ್ರಮತಿಮಾತೆಯ ಮಾ ॥
ತೆಮಗೆ ಬಲೆಯಾಯ್ತು ಹಿಂಸನ ।
ಮಮೋಘಶರಮಾಯ್ತು ಕೆಡೆದುದಾತ್ಮಕುರಂಗಂ ॥ ೨೮

---

ಹಿಟ್ಟಿನ ಕೋಳಿಯತಲೆ (ಬಾಯಿಂದ) ಯಿಂದ ಕುಕ್ಕೂಕೂ ಎಂಬ ಧ್ವನಿ ಹೊರಟಿತು. ಆ ಕೂಗು, ಮುಂದುಂಟಾಗುವ ಪಾಪಗಳನ್ನು ಗಟ್ಟಿಯಾಗಿ ಕರೆವ ಕೂಗೋ ಎಂದು ತೋರುವಂತಾಗಿ ಆ ಕೋಳಿಯ ತಲೆಯು ಸಿಡಿದು ಬಿದ್ದಿತು, ಮುಂಡವು ಸ್ವಲ್ಪದೂರಹೋಗಿ ಬಿದ್ದಿತು.

೨೬. ಹೊಡೆದೊಡನೆಯೇ ಉಂಟಾದ ಕೋಳಿಯ ಧ್ವನಿಯೇರುತ್ತಿರಲು, ಪ್ರತಿಯಾಗಿ ಪೆಟ್ಟುಬಿದ್ದಂತೆ ರಾಜನ ಕೈಯಲ್ಲಿದ್ದ ಕತ್ತಿಯು ಕೆಳಕ್ಕೆಬಿದ್ದಿತು. ಅಂಜುಬುರುಕುನಮೇಲೆ ಹಾವು ಹತ್ತಿದಂತೆ, ಮೊದಲೇ ಈ ಕೃತ್ಯದಿಂದ ಪಾಪಬರುವುದೆಂದು ಶಂಕಿಸುತ್ತಿದ್ದ ರಾಜನಿಗೆ ಅತ್ಯಂತಆಶ್ಚರ್ಯವುಂಟಾಯಿತು. ಒಡನೆಯೇ ಆ ಅಚೇತನವಾದ ಕೋಳಿಯ ಕೂಗಿನಿಂದ ಸ್ತಬ್ಧನಾಗಿ ನಿಂತನು.

೨೭. ಆಗ ದೊರೆಯು, "ನಾನೇಕೆ ತಾಯಿಯೊಡನೆ ಕನಸುಕಂಡೆನೆಂದು ಹೇಳಿದೆ? ತಾಯಿಯು ಈ ರೀತಿಯಾಗಿ ಬಲಿಕೊಡುವುದನ್ನು ತಂದೊಡ್ಡಿದಳೇಕೆ? ಈ ಕೃತಕವಾದ ಕೋಳಿಯು ಕೂಗಿದುದೇಕೆ? ವಿಧಿಯ ಕಾರ್ಯಕಲಾಪವನ್ನು ಯಾರು ತಿಳಿಯಬಲ್ಲರು?" (ವಿಧಿಯು ಈ ಬಗೆಯ ಆಕಸ್ಮಿಕ ಘಟನೆಗಳನ್ನು ತಂದೊಡ್ಡುವುದೆಂದು ಭಾವವು).

೨೮. "ಅಮೃತಮತಿಯೆಂಬ ಪಾತಕಿಯಾದ ನನ್ನ ಪತ್ನಿಯ ಮಾಯೆಯೇ ಅರಣ್ಯವಾಯಿತು, ತಾಯಿಯಾದ ಚಂದ್ರಮತಿಯ ಮಾತುಗಳೇ ಬಲೆ

ಎಂದು ಮನಂ ಮಱುಗುವಿನಂ ।
ನೊಂದಲ್ಲಿಂ ತಳರ್ದು ಮನೆಗೆಯುಬ್ಬೆಗವೆಱೆದು ॥
ಯ್ದಂದದೆ ಬಂದೀ ರಾಜ್ಯದ ।
ದಂದುಗವೇಕೆಂದು ತೊಱೆಯಲುದ್ಯತನಾದಂ ॥ ೨೯

ಪರಿವಾರಮುಂ ಪ್ರಧಾನರ ।
ನಿರಿಸಿ ಯಶೋಮತಿಗೆ ರಾಜ್ಯಮಂ ಕೊಟ್ಟು ಯಶೋ ॥
ಧರನಿಂತು ತಪಕೆ ನಡೆಯ ।
ಲ್ಕಿರೆ ವೃತ್ಯ್ಯವಿನಂತೆಯರಸಿ ಬಂದಿಂತೆಂದಳ್ ॥ ೩೦

ದೇವರ ಬೞಯೊಳೆ ಬರ್ಪೆಂ ।
ಪೂವಿನ ಸೌರಭದ ಮಾೞ್ಕೆಯಿಂ ಗಮನಪ್ರ ॥
ಸ್ತಾವನೆಯೊಳಿಂದು ನೀಮುಂ ।
ದೇವಿಯುಮಾರೊಗಿಸಲಕ್ಕೆ ಎನ್ನರಮನೆಯೊಳ್ ॥ ೩೧

ಎನೆ ಜನಪತಿ ಮನವಲ್ಲದ ।
ಮನದೊಳೊಡಂಬಟ್ಟು ಬಂದು ತಾಯೊಡನುಣೆ ನಂ ॥
ಜಿನ ಲಡ್ಡುಗೆಯಂ ಮಾಡಿದು ।
ದನುಣ್ ಮಹಾರಾಜಯೆಂಬಿನಂ ಸವಿದುಂಡರ್ ॥ ೩೨

---

ಯಾಯಿತು, ಹಿಂಸಾಕರ್ಮವೇ ಆಶ್ಚರ್ಯಕರವಾದ ಬಾಣವಾಯಿತು, ಈ ಬಾಣದಿಂದ ನನ್ನ ಆತ್ಮನೆಂಬ ಜಿಂಕೆಯು ಸತ್ತುಬಿದ್ದಿತು."

೨೯. ಎಂದು ಯೋಚಿಸಿ ಮರುಕದಿಂದ ಮನನೊಂದವನಾಗಿ ಆ ಮಾರಿಯ ಗುಡಿಯಿಂದ ಹೊರಟು, ದುಃಖವು ಎಳೆದುತಂದಂತೆ ಅರಮನೆಗೆ ಬಂದು, ಈ ರಾಜ್ಯದ ತೊಂದರೆಯೇ ಬೇಡವೆಂದು ಬಿಟ್ಟುಹೋಗುವುದಕ್ಕೆ ಸಿದ್ಧನಾದನು.

೩೦. ತನ್ನ ಪರಿವಾರದ ಜನರನ್ನೂ ಪ್ರಧಾನರನ್ನೂ ಕರೆಸಿ ಅವರನ್ನು ಮುಂದಿಟ್ಟುಕೊಂಡು ಯಶೋಮತಿಯೆಂಬ ತನ್ನ ಮಗನಿಗೆ ರಾಜ್ಯವನ್ನು ವಹಿಸಿ ತಪೋವನಕ್ಕೆ ಹೊರಡಲನುವಾದನು.

೩೧. "ಓ ಸ್ವಾಮಿಯೆ! ಹೂವಿನೊಡನೆಬರುವ ಸುಗಂಧದಂತೆ ಸ್ವಾಮಿಯನ್ನನುಸರಿಸಿ ನಾನೂ ಬರುವೆನು. ತಮ್ಮ ಈ ತಪೋವನಗಮನದ ಸಂದರ್ಭದಲ್ಲಿ ತಮಗೂ ರಾಣಿಯವರಿಗೂ ನನ್ನರಮನೆಯಲ್ಲಿ ಆರೋಗಣೆಯಾಗಬೇಕು" ಎಂದು ಕೇಳಿಕೊಂಡಳು.

೩೨. ಹೀಗೆ ಕೇಳಿಕೊಂಡ ಹೆಂಡತಿಯಮಾತಿಗೆ ರಾಜನು ಮನಸ್ಸಿಲ್ಲದ

ಅರಸನ ಮೂದಲೆ ಮನದೊಳ |
ಗಿರೆ ಮೇಳಿಸಿಕೊಂಡು ಬಂದು ಪಾತಕಿ ಕೊಂದಳ್ ||
ಬೆರಗಿಂ ಗಂಡನನಾಸ್ತ್ರೀ |
ಚರಿತಮದೇಂ ! ತಿಳಿಯಲರಿದು ಪೆಂಡಿರಕೃತಕಂ || ೩೩

ಆ ಪಕ್ವಾನ್ನಮೆ ಮೃತಿಗು |
ದ್ದೀಪನಪಿಂಡದವೊಲಾಗೆಯಘದಿಂ ಬೀಜಾ ||
ವಾಪಮೆನೆ ಜನ್ಮಲತೆಗೆ ಕ |
ಲಾಪಿಸ್ತ್ರೀಯುದರದಲ್ಲಿ ವಿಂಧ್ಯದೊಳೊಗೆದಂ || ೩೪

ಅಂತೊಗೆದು ಮೊಟ್ಟೆಯೊಡೆದ |
ಲ್ಲಿಂ ತೊಲಗದು ತುಪ್ಪುೞಡದು ಕಾಲ್ಬಲಿಯದು ಕ||
ಣ್ಣಿಂ ತೆಱೆಯದೆಂಬ ಪದಕೆ ಕೃ |
ತಾಂತನ ಹರಿಯಂತೆ ಕವಿದು ಬೇಂಟೆಯೊಳೊರ್ವಂ || ೩೫

---

ಮನಸ್ಸಿನಿಂದ ಕೂಡಿದವನಾಗಿ (ಮನಸ್ಸಿಗೆ ಬೇಕಿಲ್ಲವಾಗಿದ್ದರೂ) ಒಡಂಬಟ್ಟು ತಾಯಿಯೊಡನೆ ಆಕೆಯ ಅರಮನೆಗೆ ಬಂದು "ಮಾಡಿದ್ದುಣ್ಣೋ ಮಹಾರಾಯ" ಎಂಬ ನಾಣ್ನುಡಿಯಂತೆ ಅವಳು ಬಡಿಸಿದ ವಿಷಪೂರಿತವಾದ ಲಡ್ಡುಗೆಯನ್ನು ಇಬ್ಬರೂ ತಿಂದರು.

೩೩. ತನ್ನ ಗಂಡನು ಹೇಳಿದ್ದ ಮೂದಲೆಯಮಾತನ್ನು (ಅಂದು ಅಷ್ಟವಂಕನಿಂದವಳು ಪೆಟ್ಟುತಿಂದಿದ್ದುದನ್ನು ನೋಡಿದ್ದು—ಮರುದಿನ ನೈದಿಲೆ ಹೂವಿನೊಂದ ಹೊಡೆದಾಗವಳು ಮೂರ್ಛೆಹೊಂದಿದಾಗ "ಅಯ್ಯೋ ! ಬಹಳಕೋಮಲವಾದ ಶರೀರ–ಹೂವಿನೇಟಿಗೇ ನೊಂದುಹೋಯಿತೇನೋ ? ಎತ್ತಿ ಉಪಚಾರಮಾಡಿ ಎಂದು ಮೂದಲಿಸಿದ್ದುದನ್ನು) ಸೇರಿಸಿಕೊಂಡು (ಮನಸ್ಸಿನಲ್ಲಿಟ್ಟು) ಕ್ರೋಧದಿಂದಾ ಪಾತಕಿ ಅಮೃತಮತಿಯು ಗಂಡನನ್ನು ವಿಷಹಾಕಿ ಕೊಂದಳು, ಹೆಂಗಸರ ನಡತೆಯನ್ನು ಹೇಳಬೇಕಾದ್ದೇನು ? ಅವರ ಕೃತ್ರಿಮಸ್ವಭಾವವನ್ನಾರೂ ತಿಳಿಯಲಾರರು.

೩೪. ಆ ರಾಜನುಂಡ ಪಕ್ವಾನ್ನವೇ ಅವನ ಮರಣಕ್ಕೆ ಕಾರಣವಾಗಿ, ತಾನು ಮಾಡಿದ ಪಾಪ (ಹಿಂಸೆ) ದಿಂದ ಜನ್ಮವೆಂಬ ಲತೆಗೆ ಬೀಜಹಾಕಿದಂತೆ ವಿಂಧ್ಯಪರ್ವತದಲ್ಲೊಂದು ಹೆಣ್ಣುನವಿಲಿನುದರದಲ್ಲಿ ಹುಟ್ಟಿದನು.

೩೫-೩೭ ಹಾಗೆ ಜನ್ಮವೆತ್ತಿ ಮೊಟ್ಟೆಯಿಂದೊಡೆದು, ಕಣ್ಣುಬಿಡದೆ, ರೆಕ್ಕೆಹುಟ್ಟದೆ ಅಲ್ಲಲ್ಲಿ ಓಡಾಡುವುದಕ್ಕೂ ಆಗದಂತಹ ಸಣ್ಣಮರಿಯಾಗಿದ್ದಾಗಲೇ

ಬೇಡಂ ಪಿಳುಕೊತ್ತಿದ ತಾ ।
ಯೋಡಲ್ ಬಿಟ್ಟಲ್ಲಿ ಪಿಡಿದನಂತಾ ಪಿಳುಕಂ ॥
ಬೇಡಿತಿಗೆ ಸಲಹಲಿತ್ತೊಡೆ ।
ಗೂಡಿನೊಳದು ಬಳೆದು ತಳೆದುದಂಗಚ್ಛವಿಯಂ ॥ ೩೬

ನವರತ್ನದ ಪಂಜರದೊಳ್ ।
ದಿವಿಜಶರಾಸನದ ಮಱಿಯನಿರಿಸಿದವೊಲ್ ಸು॥
ತ್ತುನ ಸೋಗೆಯ ಸುತ್ತಿನೊಳಾ ।
ಡುವ ಕೇಕಿಯ ಭಂಗಿ ಲೋಕಮಂ ಸೋಲಿಸುಗುಂ ॥ ೩೭

ಕರಹಟದೊಳ್ ಬೇಂಟೆಯ ಕು ।
ಕ್ಕುರಿಯಾದಳ್ ಸತ್ತು ಚಂದ್ರಮತಿಯುಂ ಬಱಿಕಾ ॥
ಯೆರಡುಮುಪಾಯನಘಟನೆಯಿ ।
ನರಮನೆಯಂ ಸಾರ್ದುವಾ ಯಶೋಧರಸುತನಾ ॥ ೩೮

---

ಯಮನ ಕಿಂಕರನಂತೊಬ್ಬ ಬೇಡನು ಬೇಟೆಯಾಡುತ್ತಬಂದದನ್ನು ಮುತ್ತಿದನು (ಅಟ್ಟಿಸಿಕೊಂಡುಬಂದನು). ಹಿಡಿಯವರೆಗೂ ನಾಟಿದ ಬೇಡನ ಬಾಣದ ಹೊಡೆತದಿಂದನೊಂದ ತಾಯಿನವಿಲು ಓಡಿಹೋಯಿತು. ಅಲ್ಲಿ ನಡೆಯಲಾರದೆ ಬಿದ್ದಿದ್ದ ಸಣ್ಣಮರಿಯನೆತ್ತಿಕೊಂಡುಬಂದು ಸಾಕೆಂದು ತನ್ನ ಹೆಂಡತಿಗೆ ಕೊಡಲು ಅದು ಅವಳ ಬಳಿಯಲ್ಲಿ ಗೂಡಿನಲ್ಲಿದ್ದುಕೊಂಡು ಚೆನ್ನಾಗಿ ಬೆಳೆದು ಬಣ್ಣವುಳ್ಳದ್ದಾಯಿತು.

೩೭. ನವರತ್ನದಪಂಜರದಲ್ಲಿ ಇಂದ್ರಧನುಸ್ಸಿನ ಮರಿಯನ್ನಿರಿಸಿದಂತೆ ಬೇಡನ ಪಂಜರದೊಳಿದ್ದ ಆ ನವಿಲಮರಿಯು (ವಿವಿಧ ಬಣ್ಣವುಳ್ಳದ್ದಾಗಿದ್ದ) ತನ್ನ ಗರಿಗಳನ್ನು ಕೆದರಿ ನರ್ತನಮಾಡುವ ಆಟವು ಲೋಕಮೋಹಕವಾಗಿದ್ದಿತು.

೩೮. ಅತ್ತ ಚಂದ್ರಮತಿಯು (ವಿಷದಿಂದ) ಸತ್ತು ಕರಹಟದೇಶದಲ್ಲಿ ಬೇಟೆಯ ನಾಯಾಗಿ ಹುಟ್ಟಿದಳು. ಬೇಡನ ಮನೆಯಲ್ಲಿದ್ದ ನವಿಲು, ಈ ಬೇಟೆಯ ನಾಯಿ ಇವೆರಡೂ ನಜರಾಗಿ ಒಪ್ಪಿಸಲ್ಪಟ್ಟುವಾಗಿ (ಹೇಗೋ) ಆ ಯಶೋಧರನ ಮಗನಾದ ಯಶೋಮತಿಯ ಅರಮನೆಗೇ ಬಂದುಸೇರಿದುವು.

ತವಗಂಜುವರ್ಗೆ ತಾವಂ।
ಜುವರೆಂಜಲನಾಯ್ದು ತಿಂಬರೆಂಜಲನುಣ್ಬರ್॥
ಅವನಿಪರಾದಲ್ಲಿಯೆ ನಾ।
ಯ್ನವಿಲಪ್ಪಂತಾಯ್ತು ನೋಡೆ ಪಾಪದ ಫಲದಿಂ॥ ೩೯

ನವಿಲಮೃತಮತಿಯ ಸೊಗಯಿಪ।
ನವಸೆಜ್ಜೆಯೊಳಾಡುತಿರ್ದು ಜಾರನುಮಂತ॥
ನ್ನವಳೊಡನಿರೆ ಜಾತಿಸ್ಮರ।
ಭವರೋಷದಿನಿಱಿದುದಷ್ಟವಂಕನ ಕಣ್ಣಂ॥ ೪೦

ಆಂ ಬೆಂದೆನೆಂದು ನವಿಲಂ।
ಪಾಂಬೆ ಕನಲ್ದಡಸಿ ಪೊಯ್ಯೆ ಮೇಗಣ ನೆಲೆಯಿಂ॥
ದಂ ಬಿರ್ದುದು ಪಚ್ಚೆಯ ಪದ।
ಕಂ ಬೀೞ್ವಂದದೆ ಸುಧಾಂಶುಬಿಂಬದ ಕೊರಲಿಂ॥ ೪೧

---

೩೯. ಈ ಯಶೋಧರ ಚಂದ್ರಮತಿಯರು, ತಮಗೆ ಹೆದರುತ್ತಿದ್ದವರಿಗೇ ತಾವು ಹೆದರಬೇಕಾಯಿತು. ತಮ್ಮ ಅರಮನೆಯಲ್ಲೇ ಯಾರು ಎಂಜಲನ್ನು ಆಯ್ದು ತಿನ್ನುತ್ತಿದ್ದರೋ ಅವರ ಎಂಜಲನ್ನೇ ತಾವು ತಿನ್ನಬೇಕಾಯಿತು. (ರಾಜನಾಗಿದ್ದಾಗ ಯಶೋಧರನಿಗೂ ರಾಜನ ತಾಯಿಯಾಗಿದ್ದ ಚಂದ್ರಮತಿಗೂ ಹೆದರಿ ನಡೆಯುತ್ತಿದ್ದ ಸೇವಕರಿಗೇ ಈಗ ಅವರು, ಪ್ರಾಣಿಗಳಾಗಿ ಹುಟ್ಟಿ, ಹೆದರಬೇಕಾಯ್ತು. ತಾವು ತಿಂದುಳಿದ ಎಂಜಲನ್ನು ತಿನ್ನುತ್ತಿದ್ದ ದಾಸದಾಸಿಯರ ಎಂಜಲನ್ನೇ ತಿನ್ನುವಂತಾಯ್ತು.) ರಾಜರಾಗಿದ್ದವರೀಗ ಪಾಪದಿಂದ ನವಿಲು ನಾಯಿಗಳಾಗಿ ಹುಟ್ಟುವಂತಾಯ್ತು; ವಿಧಿಯವಿಲಾಸವನ್ನು ನೋಡಿ.

೪೦. ಆ ನವಿಲು (ನವಿಲಾಗಿ ಹುಟ್ಟಿದ್ದ ಯಶೋಧರನ ಆತ್ಮವು) ಅಮೃತಮತಿಯ ಸೆಜ್ಜೆಯುಮನೆಯಲ್ಲಾಡುತ್ತಿದ್ದುದು ಒಂದು ದಿನ ತನ್ನ ಹೆಂಡತಿಯೊಡನೆ ಕೂಡಿದ್ದ ಆ ಅಷ್ಟವಂಕನನ್ನು ನೋಡಿ ಜಾತಿಸ್ಮರನಾಗಿ (ಹಿಂದಿನ ಭವದ ವಿಚಾರವು ನೆನಪಿಗೆ ಬಂದು) ಹೋದ ಜನ್ಮದ ದ್ವೇಷದಿಂದ ಅವನ ಕಣ್ಣನ್ನು ಕುಕ್ಕಿತು.

೪೧. ಹಾ! ನಾನು ಕೆಟ್ಟೆನು ಎನುತ್ತ ಆ ಜಾರೆಯಾದ ಅಮೃತಮತಿಯು ಕೋಪದಿಂದ ಆ ನವಿಲನ್ನು ಹೊಡೆಯಲು ಅದು ಚಂದ್ರಬಿಂಬದ ಕೊರಳಿನಿಂದ ಪಚ್ಚೆಯ ಪದಕವೊಂದು ಕೆಳಗೆ ಬೀಳುವಂತೆ ಮೇಲಣ ಉಪ್ಪರಿಗೆಯಿಂದ ಕೆಳಕ್ಕೆ ಬಿದ್ದಿತು.

ಅರಸನುಮಾಗಳ್ ನೆತ್ತದ |
ಭರದಿಂ ಕೊಳ್ಳೆನುತುಮಿಕ್ಕೆ ನವಿಲಂ ಕೊಳ್ಳೆಂ ||
ದರೆನುತ್ತೆ ಪಿಡಿದುದಂಬಾ |
ಚರಿಕುರ್ಕುರಿ ನೊಂದು ಬೀೞ್ವ ನಂದನಚರನಂ || ೪೨

ಮತ್ತೆ ನೃಪಂ ನಾಯ್ತಿಂದುದು |
ಚಿತ್ರಚಮತ್ಕಾರನಂ ಮಯೂರನನೆಂದಾ ||
ನೆತ್ತದ ಮಣೆಯಿಂದಿಱಿದೊಡೆ |
ನೆತ್ತಿ ಪಿಸುಳ್ದಿತ್ತು ಸತ್ತುವಂತಾಯೆರಡುಂ || ೪೩

ಮಱುಗಿದನಿಳೇಶನಾಯೆರ |
ಡರ ಸಾವಿಂ ತಂದೆ ತಾಯ್ವಿರೞಿದಂತಿರೆ ಕ ||
ಣ್ಣಱಿಯದೊಡಂ ಕರುಳಱಿಯದೆ |
ಮಱುಗಿಸದಿರ್ಪ್ಪುದೆ ಭವಾಂತರವ್ಯಾಮೋಹಂ || ೪೪

---

೪೨. ಇತ್ತ ಕೆಳಗಡೆಯ ಅಂಗಳದಲ್ಲಿ ತನ್ನ ರಾಣಿಯೊಡನೆ ಪಗಡೆಯಾಡುತ್ತಿದ್ದ ಯಶೋಮತಿರಾಜನು ಆಟದ ಆತುರದಲ್ಲಿ ತನ್ನ ಹೆಂಡತಿಯನ್ನು ಕುರಿತು "ಎಲೆ ರಾಣಿ! ತೆಗೆದುಕೋ ನಿನಗೆ ಬೇಕಾದ ದಾಯವನ್ನು ಹಾಕುವೆನು" ಎಂದು ಹೇಳುತ್ತ ದಾಳವನ್ನು ಬಿಟ್ಟನು. ಹತ್ತಿರದಲ್ಲಿದ್ದ ನಾಯಿಯು (ಚಂದ್ರಮತಿಯ ಆತ್ಮ) ಆ ನವಿಲನ್ನು ಹಿಡಿಯೆಂದು ತನಗೆ ಸೂಚಿಸಿದಂತೆ ತಿಳಿದು ಮೇಲಿನಿಂದ ಬೀಳುತ್ತಿದ್ದ ನವಿಲನ್ನು ಹಿಡಿದು ಕೊಂದುಹಾಕಿತು.

೪೩. ಬಳಿಕ ರಾಜನು ಚಿತ್ರಚಮತ್ಕಾರಕವಾಗಿದ್ದ ನವಿಲನ್ನು ನಾಯಿಯು ತಿಂದಿತೆಂಬ ಕೋಪದಿಂದ ಪಗಡೆಯ ಹಲಗೆಯಿಂದ ನಾಯಿಯ ತಲೆಯ ಮೇಲೆ ಹೊಡೆಯಲು ಆ ನಾಯಿಯೂ ತಲೆಯೊಡೆದು ಮೃತಿಹೊಂದಿತು. ಹೀಗೆ ಆ ಎರಡು ಪ್ರಾಣಿಗಳೂ ಸತ್ತುವು.

೪೪. ಆ ನವಿಲುನಾಯಿಗಳೆರಡರ ಮರಣಕ್ಕಾಗಿ ರಾಜನು (ಯಶೋಮತಿ) ತಂದೆತಾಯಿಯರ ಮರಣಕ್ಕೆ ದುಃಖಪಡುವಂತೆ ಮರುಗಿದನು. ಕಣ್ಣಿಗವರಾರೆಂಬುದು ತಿಳಿದುಬಾರದೇ ಇದ್ದರೂ ಮನಸ್ಸು ತಿಳಿದು ದುಃಖಪಡುವುದಿಲ್ಲವೇ? ಮತ್ತೊಂದು ಜನ್ಮದ ವ್ಯಾಮೋಹವು ಈ ಜನ್ಮದಲ್ಲಿಯೂ ದುಃಖಪಡಿಸದಿರುತ್ತದೆಯೇ?

ಆ ವಿಂಧ್ಯನಗದೊಳಾನಾಯ್ |
ಪಾವಾಯ್ತಾ ನವಿಲೆ* ಯ್ಯುಮಿಗಮಾಯ್ತಾ ಯೆಯ್ ||
ಪಾವಂ ಪಗೆ ಮಿಗೆ ತಿಂದುದು |
ಮೇವಂತಿರೆ ಪುಲ್ಲಸರವಿಯಂ ಬಲ್ಗೋಣಂ || ೪೫

ಉರಗಿಯನೆಯ್ ಪಿಡಿದೊಡದಂ |
ಕುರಂಗರಿಪು ಬೆಕ್ಕು ಕೊಕ್ಕನಂ ತವೆ ಪಿಡಿವಂ ||
ತಿರೆ ಪಿಡಿದುದು " ಚಿಂತಾಗತಿ |
ಪರ ಏಹಿ " ಎನಿಪ್ಪ ಸೂಕ್ತಿ ತಪ್ಪದವೋಘಂ || ೪೬

---

೪೫. ಆ ನಾಯಿಯು ವಿಂಧ್ಯಪರ್ವತದಲ್ಲೊಂದು ಹಾವಾಗಿ ಹುಟ್ಟಿತು. ಆ ನವಿಲು ಮುಳ್ಳುಹಂದಿಯಾಗಿ ಹುಟ್ಟಿತು. ಹಾವನ್ನು ಅದರ ಶತ್ರುವಾದ ಮುಳ್ಳುಹಂದಿಯು, ದೊಡ್ಡ ಕೋಣವು ಹುಲ್ಲಿನ ಹಗ್ಗವನ್ನು ತಿನ್ನುವಂತೆ, ತಿಂದುಬಿಟ್ಟಿತು.

೪೬. ಹಾವನ್ನು ಮುಳ್ಳುಹಂದಿಯು ಹಿಡಿಯಲು ಅದನ್ನು, ಬೆಕ್ಕು ಕೊಕ್ಕರೆಯನ್ನು ಹಿಡಿಯುವಂತೆ, ಹುಲಿಯೊಂದು ಹಿಡಿದು ಕೊಂದಿತು. " ಚಿಂತಾಗತಿ ಪರ ಏಹಿ " ಎಂಬ ನೀತಿವಚನವು ತಪ್ಪುವುದಿಲ್ಲ. (ಈ ವಾಕ್ಯಕೆ " ಮನಸ್ಸಿನ ಚಿಂತೆಯು ಬಲವತ್ತರವಾದುದು " ಎಂದು ಅರ್ಥವಿರಬೇಕು. ಸಂಕಲ್ಪರೂಪವಾದ ಚಿತ್ತವೃತ್ತಿಯು ತುಂಬಾ ಬಲಿಷ್ಠವಾದುದು. ಹಿಟ್ಟಿನ ಕೋಳಿಯನ್ನು ಕೊಲ್ಲುವುದೆಂಬ—ಹಿಂಸಾರೂಪವಾದ ಚಿಂತೆಯು (ಪರಿಣಾಮ) ಈ ಬಗೆಯ ಜನ್ಮ ಪರಂಪರೆಯನ್ನು ಕೊಟ್ಟಿತು ಎಂದು ಭಾವವು).

---

* ಯಶಸ್ತಿಲಕಚಂಪುವಿನಲ್ಲಿ ಈ ಸ್ಥಳದಲ್ಲಿ ಪೃಷತಃ ಎಂದು ಪ್ರಯೋಗಿಸಿರುತ್ತದೆ. ಪೃಷತವೆಂದರೆ ಜಿಂಕೆ. ಜನ್ನನು ಎಯ್ ಎಂದು ಪ್ರಯೋಗಿಸಿದ್ದಾನೆ. ವಾದಿರಾಜನೂ ಇದೇ ಸ್ಥಳದಲ್ಲಿ ಶಲಲಃ ಎಂದು ಪ್ರಯೋಗಿಸಿದ್ದಾನೆ. ಶಲಲವೆಂದರೆ ಮುಳ್ಳುಹಂದಿ. ಆದರೆ ಮುಳ್ಳುಹಂದಿಗೂ ಹಾವಿಗೂ ಶತ್ರುತ್ವವಿದ್ದಂತೆ ಪ್ರಯೋಗವಾವುದೂ ದೊರೆತಿಲ್ಲ. ಒಂದೆರಡು ಕಡೆಗಳಲ್ಲಿ ಜಿಂಕೆಗೂ ಹಾವಿಗೂ ದ್ವೇಷವಿರುವಂತೆ ಪ್ರಯೋಗವಿದೆ. ಹಾಗಿದ್ದರೂ ಜನ್ನನೇಕೆ ಎಯ್ ಎಂದು ಹೇಳಿದನೋ ತಿಳಿಯದು ಅಥವ ಎಯ್ ಎಂಬುದಕ್ಕೆ ಜಿಂಕೆ ಎಂಬರ್ಥವೆಲ್ಲಾದರೂ ಸಿಕ್ಕಬಹುದೋ ನೋಡಬೇಕು. ಮುಂದೆ ಹುಲಿಯು ಮುಳ್ಳುಹಂದಿಯನ್ನು ತಿಂದಂತೆ ಹೇಳಿರುವುದೂ ಸಾಧುವಲ್ಲ. ಹುಲಿಯು ಮುಳ್ಳುಹಂದಿಯನ್ನು ತಿನ್ನುವುದಿಲ್ಲ—ತಿನ್ನಲೂ ಆರದು.

ಮೀನಾದುದೆಯ್ಯುಮಿಗಮು ।
ಜ್ಜೇನಿಯ ದೇಶದೊಳುಮೆಸೆವ ಸಿಪ್ರಾನದಿಯೊಳ್ ॥
ತಾನಲ್ಲಿ ಮೊಸಳೆಯಾದ ।
ತ್ತಾ ನಾಗನುಮಾಗಿ ಬಳೆದು ಮತ್ತೊಂದುದಿನಂ ॥ ೪೭

ನದಿ ಕೆಣ್ದೆಱೆದಂತೆ ಪೊಳಂ ।
ಕಿದ ಮೀನಂ ಮೊಸಳೆ ಪಾಯೆ ನರಪತಿಯ ವಿನೋ ॥
ದದ ಗುಜ್ಜೆ ಸಿಲ್ಕೆ ಪಿಡಿದ ।
ತ್ತದನಧಿಪತಿ ಜಾಲಗಾಱರಿಂ ತೆಗೆಯಿಸಿದಂ ॥ ೪೮

ಪಲವಂದದ ನಿಗ್ರಹದಿಂ ।
ಕೊಲಿಸಿದೊಡಾ ಮೊಸಳೆ ತನುವನುಳಿದು ಬಳಿಕ್ಕಾ ॥
ಪೊಲಗೇಱಯಾಡಿನುದರದೆ ।
ನೆಲಸಿ ಬೞಿಕ್ಕೊಯ್ಯನೊಗೆದುದಾಡಿನ ರೂಪಂ ॥ ೪೯

ಮತ್ತೊರ್ಮೆ ಜಾಲದೊಳ್ಸಿ ।
ಲ್ಕತ್ತೆಯ್ಯಾಗಿರ್ದ ಮೀನದಂ ಶ್ರಾದ್ಧಕ್ಕ ॥
ತ್ಯುತ್ತಮುಲೋಹಿತಮತ್ಸ್ಯಮು ।
ಮುತ್ತಮಮೆಂದೊಂದು ಕಡಿಯನಡಿಸಿದನರಸಂ ॥ ೫೦

---

೪೭. ಆ ಮುಳ್ಳುಹಂದಿಯು ಉಜ್ಜಯಿನೀ ದೇಶದಲ್ಲಿ ಸಿಪ್ರಾನದಿಯಲ್ಲಿ ಮೀನಾಗಿ ಹುಟ್ಟಿತು. ಹಾವಾಗಿದ್ದು ಸತ್ತುದು ಅಲ್ಲಿಯೇ ಮೊಸಳೆಯಾಗಿ ಹುಟ್ಟಿತು. ಇವೆರಡೂ ಬೆಳೆಯುತ್ತಿದ್ದುವು.

೪೮. ನದಿಯೇ ಕಣ್ಣುಬಿಟ್ಟಂತೆ ಹೊಳೆದು ನೆಗೆದ ಮೀನನ್ನು ಹಿಡಿಯಲು ಮೊಸಳೆ ನುಗ್ಗಿತು. ಅಷ್ಟರಲ್ಲಿ ಈ ನಡುವೆ ಅಲ್ಲಿಗೆ ಸ್ನಾನಮಾಡಲು ಬಂದಿದ್ದ ರಾಜನರಮನೆಯ ಗುಜ್ಜೆಯೊಬ್ಬಳು ಸಿಕ್ಕಲು ಅವಳನ್ನು ಮೊಸಳೆಯು ಹಿಡಿದು ನುಂಗಿತು. ಇದನ್ನು ತಿಳಿದ ರಾಜನು (ಯಶೋಮತಿ) ಆ ಮೊಸಳೆಯನ್ನು ಬಲೆಗಾರರಿಂದ ಹಿಡಿಸಿ ತೆಗೆಸಿದನು.

೪೯. ರಾಜನಾಮೊಸಳೆಯನ್ನು ಚಿತ್ರಹಿಂಸೆಮಾಡಿಸಿ ಕೊಲ್ಲಿಸಿದನು. ಅದು ಸತ್ತು ಹೇಗೋ ಆ ನಗರದ ಹೊಲಗೇರಿಯ ಆಡೊಂದರ ಹೊಟ್ಟೆಯಲ್ಲಿ ಆಡಾಗಿ ಹುಟ್ಟಿತು.

೫೦. ಮುಳ್ಳುಹಂದಿಯಾಗಿದ್ದು ಸತ್ತು ಆ ಸಿಪ್ರೆಯಲ್ಲಿ ಮೀನಾಗಿ ಹುಟ್ಟಿದ್ದುದು (ಯಶೋಧರನ ಆತ್ಮ) ಬೆಸ್ತರ ಬಲೆಗೆ ಸಿಕ್ಕಿ ರಾಜನಿಗೆ ಒಪ್ಪಿಸಲ್ಪಟ್ಟಿತು.

ಉೞಿದ*ಕಡಿ ಜೀವಮೇಱು |
ತ್ತಿೞಿಯುತ್ತಿರೆ ನೀರೊಳಿಡಿಸಿ ಜೀವಶ್ರಾದ್ಧ ||
ಕ್ಕುೞಿದಿರ್ದ ಮಾಜನಂಗಳ್ |
ಕೞಿಯುಂಡಾಪೋಶಿಪಲ್ಲಿ ನೆನೆದುದು ತನ್ನಂ || ೫೧

ಮೀನಾಗಿಸಾಯುತಿರ್ದಪೆ |
ನಾನೀ ಪಾರ್ವರ್ ಯಶೋಧರಂ ಸುಖದಿಂದಿ ||
ರ್ಕಾನಾಕದೊಳೆಂದೂೞ್ದಿಪ |
ರೀ ನೃಪನುಂ ನಂಬಿದಪ್ಪನಕ್ಕಟ ವಿಧಿಯೇ ! || ೫೨

ಎನುತುಂ ಜಾತಿಸ್ಮರನ |
ಪ್ಪನಿಮೇಷಂ ಜೀವಿತಾಂತ್ಯದೊಳ್ ಮುನ್ನೊಗೆದಾ ||
ಡಿನ ಬಸಿಱೊಳ್ಬಂದುದು ಪೋಂ |
ತಿನರೂಪಿಂ ಬಳೆದು ಬೞಿಕ ಮದನೋನ್ಮತ್ತಂ || ೫೩

---

ತನ್ನಲ್ಲಿಗೆ ತರಲ್ಪಟ್ಟ ಅದನ್ನು ನೋಡಿ ರಾಜನು ಲೋಹಿತಮತ್ಸ್ಯ (ಹಳದಿ ಬಣ್ಣದ್ದು) ವಾಗಿದ್ದುದರಿಂದದು ಶ್ರಾದ್ಧಕ್ಕೆ ಅತ್ಯುತ್ತಮವಾದುದೆಂದು ನೆನೆದು, ಅದರ ಒಂದು ತುಂಡನ್ನು ಕತ್ತರಿಸಿ ಶ್ರಾದ್ಧದ ಅಡಿಗೆಮಾಡಿಸಿದನು.

೫೧. ಆ ಮೀನಿನ, ಕತ್ತರಿಸದೆ ಉಳಿದಿದ್ದ ತಲೆಯಕಡೆಯ ತುಂಡನ್ನು ನೀರಿನೊಳಗಿಡಿಸಿದನು. ಅದರ ಪ್ರಾಣವು ಏರುತ್ತಿಳಿಯುತ್ತಿದ್ದಿತು*. ಜೀವ ಶ್ರಾದ್ಧಕ್ಕೆ ಬಂದಿದ್ದ ಮಹಾಜನರು (ಬ್ರಾಹ್ಮಣರು) ಸಂತೋಷದಿಂದ ಅಡಿಗೆ ಮಾಡಿದ್ದ ಮೀನಿನ ಮಾಂಸವನ್ನು ತಿಂದು ತೇಗಿ ಆಪೋಶನತೆಗೆದುಕೊಳ್ಳುತ್ತಿದ್ದ ಸಮಯದಲ್ಲಿ, (ಅವರು ಆಶೀರ್ವಾದಮಾಡುತ್ತಿರಲು)

೫೨-೫೩. ಆಗ ನೀರೊಳಗೆ ಮರಣೋನ್ಮುಖವಾಗಿದ್ದ ಆ ಮೀನಿನತುಂಡು (ಅರ್ಧಭಾಗ—ಹಿಂದಣರ್ಧವನ್ನು ಕತ್ತರಿಸಿದರೂ ನೀರೊಳಗೇ ಇದ್ದರೆ ಮೀನು ಸ್ವಲ್ಪಕಾಲದವರೆಗೆ ಬದುಕಿರುತ್ತದೆ). ನಾನಿಲ್ಲಿ ಮೀನಾಗಿ ಸಾಯುವುದರಲ್ಲಿದ್ದೇನೆ. “ಯಶೋಧರನು (ಈ ಶ್ರಾದ್ಧಮಾಡಿದ ರಾಜನತಂದೆ) ಸ್ವರ್ಗದಲ್ಲಿ ಸುಖದಿಂದಿರುವನೆಂದು ಈ ಬ್ರಾಹ್ಮಣರು ಕೂಗಿಕೊಳ್ಳುತ್ತಿರುವರಲ್ಲಾ ! ರಾಜನೂ ಅದನ್ನೇ ನಂಬಿರುವನಲ್ಲಾ ! ಅಯ್ಯೋ ! ವಿಧಿಯೇ !” ಎಂದು ಜಾತಿಸ್ಮರನಾದ ಆ ಮೀನು ಸತ್ತು, ಇದಕ್ಕೆ ಮೊದಲೇ ಹೊಲಗೇರಿ

---

*ಒಂದು ಪ್ರಾಣಿಯ ದೇಹದ ಒಂದು ಅಂಗವನ್ನು ಮಾತ್ರ ಕತ್ತರಿಸಿ ಅದನ್ನು ಬೇಯಿಸಿ, ಆ ಪ್ರಾಣಿಯು ಪ್ರಾಣಬಿಡುವುದಕ್ಕೆ ಮುಂಚೆಯೇ ಶ್ರಾದ್ಧವಿಧಿಗಳನ್ನು ಮುಗಿಸಬೇಕು. ಈ ವಿಧವಾದ ಶ್ರಾದ್ಧಕ್ಕೆ ಜೀವಶ್ರಾದ್ಧವೆಂದು ಹೇಳುವರು.

ಬಿದೆಯೊಡದ ತಾಯನೇಱಿದು ।
ದದು ಸೊರ್ಕಿದ ಗೂಳಿ ತಾಯನೇಱಿತ್ತೆಂಬಂ ॥
ದದೆ ಮತ್ತಮೊಂದು ಬಸ್ತಕ ।
ಮದನಿಱಿಯಲ್ ಸತ್ತು ಪೊಕ್ಕುದಜೆಯೊಳ್ ಜೀವಂ ॥ ೫೪

ಅಲ್ಲಿಯೆ ಪೋಂತಪ್ಪುದುಮದು ।
ಮೆಲ್ಲನೆ ತೆನೆತೀವಿ ಸುೞಿಯೆ ಕಂಡೊರ್ವ್ವ ಮಹೀ ॥
ವಲ್ಲಭನುಂ ಬೇಂಟೆಯೊಳಡ ।
ಗಿಲ್ಲದೆ ಬರುತೆಚ್ಚನಿದಿರೊಳಜಗರ್ಭಿಣಿಯಂ ॥ ೫೫

ಇಸೆ ಪಸುಮೞಿ ಯೋನಿಮುಖ ।
ಪ್ರಸವಕ್ಕಲಸಿದವೊಲೇಱ ಬಾಯಿಂ ತಾನೊಂ ॥
ದಸುವೆರಸು ಬಿರ್ದುದಂ ಕರು ।
ಣಿಸಿ ಮತ್ತಂ ಮಾದರಂಗೆ ಸಲಹೆಂದಿತ್ತಂ ॥ ೫೬

---

ಯಲ್ಲಿ (ಮೊಸಳೆಯಾಗಿದ್ದು ಸತ್ತು) ಹುಟ್ಟಿದ್ದ ಆಡಿನ ಹೊಟ್ಟೆಯಲ್ಲೇ ಹೋತನಾಗಿ ಹುಟ್ಟಿ ಪುಷ್ಟವಾಗಿ ಬೆಳೆದು ಚೆನ್ನಾಗಿ ಕೊಬ್ಬಿದ್ದಿತು.

೫೪. "ಸೊಕ್ಕಿದ ಗೂಳಿ ತಾಯಮೇಲೆ ಹತ್ತಿತು" ಎಂಬ ನಾಣ್ಣುಡಿಯಂತೆ ಆ ಕೊಬ್ಬಿದ್ದ ಹೋತನು ಒಂದುದಿನ ತನ್ನ ತಾಯಮೇಲೆಯೇ ಹತ್ತಿತು. ಅದನ್ನು ಕಂಡ ಇನ್ನೊಂದು ಬಲಿಷ್ಟವಾದ ಹೋತನು ಆ ಆಡಿನ ಮೇಲೇರಲು ಬಂದು ಮತ್ಸರದಿಂದ ಆ ತಾಯಮೇಲೇರುತ್ತಿದ್ದ ಹೋತನನ್ನು ಕೊಂದಿತು. ಅದು ಸತ್ತು ತನ್ನ ತಾಯಾಗಿದ್ದ ಆಡಿನಹೊಟ್ಟೆಗೇ ಮತ್ತೆ ಸೇರಿ ಅಲ್ಲಿ ಬಳೆಯುತ್ತಿದ್ದಿತು.

೫೫. ಅದು ಅಲ್ಲಿ ಹೋತನಾಗಿ ಗರ್ಭದಲ್ಲಿ ಬೆಳೆಯುತ್ತಿರಲೊಂದು ದಿನ ರಾಜನಾದ ಯಶೋಮತಿಯು ಬೇಟೆಗೆಂದು ಬಂದು ಎಲ್ಲೂ ಪ್ರಾಣಿಗಳು ಸಿಕ್ಕದೆ ಬರುತ್ತಿದ್ದವನಲ್ಲಿಯೇ ಸುಳಿದಾಡುತ್ತಿದ್ದ ಪೂರ್ಣಗರ್ಭಿಣಿಯಾಗಿದ್ದ ಆಡಿಗೆ ಬಾಣಪ್ರಯೋಗಮಾಡಿದನು-

೫೬. ಬಾಣಪ್ರಯೋಗದಿಂದ ಸತ್ತ ಆ ಆಡಿನ ಹೊಟ್ಟೆಯೊಳಗಿದ್ದ ಹೋತನು ಯೋನಿಮುಖದಿಂದ ಹುಟ್ಟುವುದಕ್ಕೆ ಬೇಸತ್ತಂತೆ ಬಾಣಪ್ರಯೋಗದಿಂದಾಗಿದ್ದ ಗಾಯದಿಂದಲೇ ಜೀವಸಹಿತವಾಗಿ ಹೊರಕ್ಕೆಬಿದ್ದಿತು. ಅದನ್ನು ಕಂಡು ರಾಜನು ಕರುಣದಿಂದದನ್ನು ಎತ್ತಿಸಿತಂದು ಸಾಕೆಂದು ಒಬ್ಬ ಮಾದಿಗರವನಿಗೆ ಕೊಟ್ಟನು.

ಒರ್ಮೆ ಯಶೋಮತಿ ಮೃಗಯಾ ।
ನರ್ಮಮನಂ ಪರಿಸೆನಡೆದು ಮೃಗಮಂ ಪಡೆದಾ ॥
ಯೆರ್ಮೆಯ ಪೋಱಿಯನಿಕ್ಕಿದ ।
ನೂರ್ಮರಿಗೆ ಮತ್ತಮದನೆ ಮಹಳಕ್ಕಿತ್ತಂ ॥ ೫೭

ಅದಱಡಗು ಮುಗ್ಗಿ ಪುೞುಪ ।
ತ್ತಿದೊಡಾಱಲ್ ಪರಪೆ ಕಾಗೆಯುಂ ನಾಯುಂ ಮು ॥
ಟ್ಟಿದುದದನೆ ಶುದ್ಧಮಂ ಮಾ ।
ಟ್ಟಿದನಿಂತೆಂದೋದಿದರ್ ಪುರೋಹಿತರೆಲ್ಲರ್ ॥ ೫೮

"ಶುಚಿ-ರಜರಜಸಿಭವೇನ್ಮಾ ।
ಸ್ಪಚನೇಽಸ್ಪೃಷ್ಟದೋಷ" ಮೆಂಬುದು ವೇದ ॥
ಪ್ರಚುರಮೆನೆ ನಂಬಿ ನೃಪನಾ ।
ವಚನಮುಮಂ ನೆನೆದನಂದು ಪೊಲೆಯರ ಪೋತಂ ॥ ೫೯

ತರಿಸಿ ಪರಿಶುದ್ಧಿಗೆಯ್ದದ ।
ನಱಿದದನಾ ಪಾರ್ವರುಂಡು ತಣಿದಿರ್ದು ಯಶೋ ॥
ಧರಚಂದ್ರಮತಿಗಳೊಸೆದುಂ ।
ಬರೊ ಸಗ್ಗದ ಸುಖಮನೆಂದೊಡೋಹೋಯೆಂದರ್ ॥ ೬೦

---

೫೭. ಮತ್ತೊಂದು ದಿನ ಯಶೋಮತಿಯು ವಿನೋದದಿಂದ ಬೇಟೆಗೆಂದು ಜನರೊಡನೆ ಬಂದು ಸಿಕ್ಕಿದ ಒಂದು ಕಾಡೆಮ್ಮೆಯ ಕೋಣನನ್ನು ಕೊಂದು ಅದನ್ನು ತನ್ನ ನಗರದ ಮಾರಿಯ ಮಹಾಲಯ ಪೂಜೆಗೆಂದು ಕೊಟ್ಟನು.

೫೮. ಆ ಕೋಣನ ಮಾಂಸವು ಕೊಳೆತು ಹುಳು ಹತ್ತಿದ್ದುದನ್ನು ಕಂಡು ಆರಿಸಲೆಂದು ಬಿಸಿಲಿನಲ್ಲಿ ಅದನ್ನು ಹರಹಿದರು. ಅದನ್ನು ಕಾಗೆಗಳೂ ನಾಯಿಗಳೂ ಮುಟ್ಟಿದುವು. ಆಗ ಅದನ್ನು ಶುದ್ಧಮಾಡುವುದಕ್ಕೆಂದು ಪುರೋಹಿತರು ಶಾಸ್ತ್ರವಚನವನ್ನು ಹೀಗೆ ಓದಿದರು.

೫೯. "ಸ್ಪರ್ಶದೋಷವುಳ್ಳ (ನೀಚಪ್ರಾಣಿಗಳು ಮುಟ್ಟಿದ) ಮಾಂಸವು *ಆಡಿನ ಕಾಲಗೊರಸಿನ ಧೂಳಿಯಿಂದ ಶುಚಿಯಾಗುತ್ತದೆ" ಎಂದು ವೇದದಲ್ಲುಕ್ತವಾಗಿದೆಯೆಂದು ಹೇಳಿದ ಪುರೋಹಿತರ ಮಾತನ್ನು ನಂಬಿ ಹಿಂದೆ ತಾನು ಸಾಕೆಂದು ಮಾದಿಗರವನಿಗೆ ಕೊಟ್ಟಿದ್ದ ಹೋತದ ಮರಿಯನ್ನು ಜ್ಞಾಪಿಸಿಕೊಂಡನು.

೬೦. ಆ ಹೋತನನ್ನು ತರಿಸಿ ಅದರಿಂದಾಮಾಂಸವನ್ನು ಪರಿಶುದ್ಧಿಮಾಡಿಸಿ

---

*ವಾದಿರಾಜನು 'ಅಂತಹ ದುಷ್ಟಮಾಂಸವನ್ನು ಆಡು ಮೂಸಿದರೇ ಅದು ಶುದ್ಧವಾಗುವುದು' ಎಂದು ಹೇಳಿರುವನು.

ಆ ವಿಪ್ರಘೋಷಣಂ ಸ್ಮೃತಿ ।
ಗಾವಹನವಿಧಾನಮಾದವೊಲಜಪೋತಂ ॥
ಭಾವಿಸಿದುದಾಂ ಯಶೋಧರ ।
ದೇವನೆಮೆನ್ನಾತ್ಮಜಂ ಯಶೋಮತಿಯಿಾತಂ ॥ ೬೧

ಪೋಂತಾದೆನಿಲ್ಲಿ ಸಗ್ಗದೊ ।
ಳಿಂತುಂಡಪೆನುಂಡ ಪಾರ್ವರೊಲಿದಿದ ಗೆಡೆವರ್ ॥
ಪೋಂತಂ ಕೊಂದು ದಿವಕ್ಕದು ।
ಮುಂತಾಗಿಯೆ ಸಲ್ವುದೆಂಬರಿದನೇನೆನ್ನರ್ ॥ ೬೨

ಈ ನಗರಿಯುಪ್ಪುದೆನ್ನು ।
ಜ್ಜೇನಿ ಇದಾಗಿರ್ಪುದೆನ್ನ ದವಳಾರಮುದುಂ ॥
ತಾನಮೃತಮತಿಯ ಮಾಡಂ ।
ಮಾನಿನಿ ಸಂಜಿಟ್ಟಳೆನಗೆ ಮುಡುಪಿದೆನದಱೊಳ್ ॥ ೬೩

---

ದನು. ಅದನ್ನು ತಿಳಿದಾಪುರೋಹಿತರು ಆ ಮಾಂಸವನ್ನು ತೃಪ್ತಿಯಾಗುವಂತೆ ಉಂಡು ಸಂತುಷ್ಟರಾಗಿ "ಯಶೋಧರ ಚಂದ್ರಮತಿಗಳೀಗ ಸ್ವರ್ಗದಲ್ಲಿ ಸುಖವನುಣ್ಣುತ್ತಿರುವರೋ ?" ಎಂದು ಕೇಳಿದ ರಾಜನಿಗೆ ಎಲ್ಲರೂ "ಹೋಹೋ ಸ್ವರ್ಗದಲ್ಲಿರುವರು" ಎಂದು ಕೂಗಿಕೊಂಡರು.

೬೧. ಆ ಬ್ರಾಹ್ಮಣರ ಕೂಗು ಎಚ್ಚರಿಸಲು, ಆ ಹೋತನಿಗೆ ತನ್ನ ಹಿಂದಣ ವಿಷಯವು ನೆನಪಿಗೆ ಬಂದು ಅದು ಜಾತಿಸ್ಮರನಾಗಿ "ನಾನೇ ಯಶೋಧರನು. ಇವನೇ ನನ್ನ ಮಗ ಯಶೋಮತಿಯು." ಎಂದು ತಿಳಿದುಕೊಂಡಿತು.

೬೨. ಇಲ್ಲಿ ಹೋತನಾಗಿ ಹುಟ್ಟಿರುವ ನಾನು ಸ್ವರ್ಗಸುಖವನನುಭವಿಸುವುದು ಹೇಗೆ ? ಈ ಪುರೋಹಿತರುಗಳು ಶ್ರಾದ್ಧದ ನೆಪದಿಂದ ಮಾಂಸವನ್ನು ತೃಪ್ತಿಯಾಗಿ ತಿಂದು ಮನಸ್ಸಿಗೆ ಬಂದಂತೆ ಹರಟುತ್ತಿರುವರಲ್ಲಾ ! ಯಜ್ಞದಲ್ಲಿ ಹೋತನನ್ನು ಕೊಂದು ಅದು ಮೊದಲು ಸ್ವರ್ಗಕ್ಕೆ ಹೋಗುವುದೆಂದು ಹೇಳುವರು. ಇಂತಹವರು, ನನ್ನನ್ನು ಸ್ವರ್ಗದಲ್ಲಿರುವನೆಂದು ಹೇಳಲು ಹಿಂಜರಿಯುವರೇ ? ಇವರು ಏನನ್ನುತಾನೇ ಹೇಳದಿರುವರು.

೬೩. ಈ ನಗರವೇ ನನ್ನ ಉಜ್ಜಯಿನಿಯು. ಇದೇ ನನ್ನ ಧವಳಾಗಾರ (ಸೆಜ್ಜೆಮನೆ) ವು. ಅಲ್ಲಿಕಾಣುವುದು ಅಮೃತಮತಿಯ ಉಪ್ಪರಿಗೆಯು. ಅವಳೇ ನನಗೆ ವಿಷವಿಕ್ಕಿದಳು. ಅದರಿಂದಲೇ ನಾನು ಸತ್ತೆನು. ಎಂದು ಹಿಂದಣ ಜನ್ಮವನ್ನೆಲ್ಲಾ ನೆನೆದುಕೊಂಡಿತು.

ಇರ್ದಳೊ ಮೇಣ್ಬರ್ದಳೊ ಮೇ |
ಣರ್ದಳೋ ಮೇಣಷ್ಟವಂಕನೊಳ್ ಕಷ್ಟೆಯದೆಂ ||
ತಿರ್ದಪಳೊ ಕಾಣೆ ನಾನೆನು |
ತಿರ್ದುದು ಕೋಟಲೆಗೆ ಕೋಡುಮೂಡಿದ ತೆಱದಿಂ || ೬೪

ಇತ್ತಲ್ ನೃಪಸಂದೆಚ್ಚೊಡೆ |
ಸತ್ತಾಡು ಕಳಿಂಗದಲ್ಲಿ ಕೋಣನಮೆಯ್ಯಂ ||
ಪೆತ್ತಿರೆ ಬೆನ್ಮುಱಿವಂತಿರೆ |
ಪಿತ್ತಳೆಯಂ ಪೇಱಿ ತಂದು ಬಿಟ್ಟಂ ಪರದಂ || ೬೫

ಸೀರಡಿಸಿ ಕುಡಿದು ಸಿಪ್ರೆಯ |
ನೀರೊಳಗರೆಮುಱುಗಿ ಮುಗ್ಗುಲಿಕ್ಕಿರ್ದುದು ಮು ||
ನ್ನೀರಂ ನಿಲಾಚಲದಿಂ |
ಸಾರಂಗಟ್ಟಿದವೊಲಿರೆ ಬಱಲ್ದು ಲುಲಾಯಂ || ೬೬

ಆಯೆಡೆಗೆ ನೀರುಣಲ್ಬರೆ |
ಜಾಯ-ಲಮರಸನ ಪಸಾಯಿತಂ ಕೋಡೆರಡುಂ ||
ಕೋಯೆ ಸೆಳೆದಶ್ವಮುಹಿಷ |
ನ್ಯಾಯಂ ನಿಲೆ ಕೊಂದುದಂತದಂ ಕೇಳ್ದರಸಂ || ೬೭

---

೬೪. "ಅಮೃತಮತಿಯು ಇನ್ನೂ ಜೀವಿಸಿರುವಳೋ, ಅಥವ ಸತ್ತಳೋ, ಸತ್ತಿದ್ದರೆ ಯಾವ ನರಕದಲ್ಲಿ ಬಿದ್ದು ಮುಳುಗಿರುವಳೋ, ಅಥವಾ ಜೀವಿಸಿದ್ದರೆ ಅಷ್ಟವಂಕನೊಡನೆ ಕೂಡಿಯೇ ಇರುವಳೋ, ಕಷ್ಟಕ್ಕೀಡಾದವಳು ಹೇಗಿರುವಳೋ ? ನನಗೆ ತಿಳಿಯದೆಂದು ಯೋಚಿಸುತ್ತಾ, ಮೊದಲೇ ಉಂಟಾಗಿದ್ದ ತೊಂದರೆಗೆ ಕೊಂಬುಹುಟ್ಟಿದಂತೆ (ಅನೇಕಶಾಖೆಗಳಾದಂತೆ) ಅತಿಯಾಗಿ ದುಃಖಪಡುತ್ತಿದ್ದಿತು.

೬೫. ಇತ್ತ ಯಶೋಮತಿರಾಜನು ಅಂದು ಹೊಡೆದು ಕೊಂದಿದ್ದ (ತೆನೆಯಾಗಿದ್ದ ಆಡು) ಆಡು ಸತ್ತು ಕಳಿಂಗದೇಶದಲ್ಲಿ ಕೋಣನಾಗಿ ಹುಟ್ಟಿದ್ದುದನ್ನು ಒಬ್ಬವ್ಯಾಪಾರಿಯು ತನ್ನ ಕೆಲಸಕ್ಕಿಟ್ಟುಕೊಂಡಿದ್ದು ಅದರ ಬೆನ್ನು ಮುರಿದು ಹೋಗುವಂತಹ ಭಾರವಾದ ಹಿತ್ತಾಳೆಪಾತ್ರೆಗಳ ಹೊರೆಯನ್ನು ಹೊರಿಸಿ ತಂದು ಉಜ್ಜಯಿನಿಯ ಸಮೀಪದಲ್ಲಿ ಬೀಡುಬಿಟ್ಟನು.

೬೬. ಹೇರನ್ನು ಹೊತ್ತುತಂದು ಆಯಾಸಗೊಂಡಿದ್ದ ಆ ಕೋಣನು ಬಾಯಾರಿ ಸಿಪ್ರಾನದಿಯಲ್ಲಿ ನೀರುಕುಡಿದು ನೀರೊಳಗೆ ಅರ್ಧಮುಳುಗಿ ಸಮುದ್ರಕ್ಕೆ ನಿಲಾಚಲದಿಂದ ಕಟ್ಟೆಕಟ್ಟಿದಂತೆ ಮಲಗಿದ್ದಿತು.

೬೭. ಆ ಸಂದರ್ಭದಲ್ಲಿ ಅರಸನಿಗೆ ಪ್ರಿಯವಾಗಿದ್ದ ಪಟ್ಟದಕುದುರೆಯು

ಕಡೆಯೊಳ್ ಕೋಣನ ಪೊರ್ಕುಳಿ |
ಗಿಡುವಿಗೆ ಮಿತ್ತೆಂಬ ತೆಱದೆ ಪರದನ ಬೀಡಂ ||
ಬಿಡೆ ಸೂಱೆಗೊಂಡು ತನ್ನಂ |
ಪಿಡಿತರಿಸಿ ವಿಚಿತ್ರವಿವಿಧ ಕೊಲೆಯಿಂ ಕೊಂದಂ || ೬೮

ಸೊಣಱಿಂ ಮುಡುಪಿಂದಂ ಪಿಂ |
ತಣಮುಂತಣ ಕಾಲ್ಗಳಲ್ಲಿ ಬೆಟ್ಟಿಸಿ ದಸಿಯಂ ||
ನೆಣಮುರ್ಕೆ ಬೆಂಕಿಯಿಂ ಕೆಳ |
ಗಣ ಮೆಯ್ಯಿಂದುರುಪಿ ಬರಿಯಬಾಡಂ ತೆಗೆದರ್ || ೬೯

ಆಸನದಿಂ ಬಾಯಿಂ ಪೊಯ್ |
ಸಾಸುವೆಮೆಣಸುಪ್ಪುಗೂಡಿ ನಿಲವಿನಸೂಡಿಂ ||
ಲೇಸಾಗಿಬೆಂದ ಬಾಡಂ |
ಬಾಸಣಿಸಿಟ್ಟದನೆಯಮೃತಮತಿಗಟ್ಟಿಸಿದಂ || ೭೦

ಅದು ಸತ್ತು ಸವೆದೊಡಾ ಮಾಂ |
ಸದ ಸವಿಗಂಡರಸಿ ತರಿಸಿದಳ್ ಬಾಣಸದೊಳ್ ಕ ||
ಟ್ಟಿದಪೋಂತಂ ತಿಂಗುಱಿಮಾ |
ಡಿದಳದನಱಿವಲ್ಲಿ ತೊತ್ತಿರೆಂಗುಂ ತಮ್ಮೊಳ್ || ೭೧

---

ನೀರನ್ನು ಕುಡಿಯುವುದಕ್ಕಾಗಿ ಸಿಪ್ರಾನದಿಗೆ ಬಂದಿದ್ದುದನ್ನು ಕಂಡು ಕೋಣನು ತನ್ನ ಕೊಂಬುಗಳಿಂದದನ್ನು ಚುಚ್ಚಲು ಆಯೆರಡೂ ಜಗಳವಾಡಿ ಕೋಣನು ಕುದುರೆಯನ್ನು ಕೊಂದಿತು. ಅದನ್ನು ಅರಸನು ಕೇಳಿ,

೬೮. "ಕೋಣಗಳ ಜಗಳದಿಂದ ಪರ್ಯವಸಾನದಲ್ಲಿ ಮರಗಳಿಗೆ ಮೃತ್ಯು" ಎಂಬಂತೆ ಈ ಕೋಣಕುದುರೆಗಳ ಜಗಳದಿಂದ ಕುಪಿತನಾದ ರಾಜನು ಆ ವ್ಯಾಪಾರಿಯ ವಸ್ತುಗಳನ್ನೆಲ್ಲಾ ಸೂರೆಮಾಡಿಸಿ ಆ ಕೋಣನನ್ನು ತರಿಸಿ ಚಿತ್ರವಧೆಮಾಡಿಸಿ ಕೊಂದನು.

೬೯. ಹೀಗೆ ಕೊಂದ ಕೋಣನ ತಲೆಯಿಂದ ಪೃಷ್ಠದವರೆಗೂ ಗೂಟಗಳನ್ನು ಪೆಟ್ಟಿಸಿ ನಾಲ್ಕು ಕಾಲುಗಳನ್ನೂ ಕಟ್ಟಿ ತೂಗುಹಾಕಿ ಬೆಂಕಿಯನ್ನು ಹಾಕಿ ಬೇಯಿಸಿ ಕರಗಿದ ಕೊಬ್ಬನ್ನೂ ಮಾಂಸವನ್ನೂ ತೆಗೆಯಿಸಿ,

೭೦. ಅದರ ಆಸನ ರಂಧ್ರದಿಂದ ಮೆಣಸು ಉಪ್ಪು ಮೊದಲಾದುವನ್ನು ತುಂಬಿ ನಿಲ್ಲಿಸಿದ ಉರಿಯಿಂದ ಬೇಯಿಸಿ ಹದಗೊಳಿಸಿಟ್ಟಿದ್ದು ಅದನ್ನು ಅಮೃತಮತಿಗೆ ತಿನ್ನಲು ಕಳುಹಿಸಿದನು.

೭೧. ಹಾಗೆ ಸತ್ತ ಕೋಣನ ಮಾಂಸದ ರುಚಿಯನ್ನು ತಿಳಿದು ಅಮೃತ

ಬಸಿದಪುದು ಮೆಯ್ಯಕೀವುಂ ।
ರಸಿಗೆಯುಮೊಡಲಟಿದುದಾದೊಡಂ ಮಾಣದೆ ನಾ ॥
ಯ್ಬಸನಿಗತನಮುಂ ಕಂಡೀ ।
ಕಿಸುಗುಳಿಯಂ ಜವನುಮುಯ್ಯಲೇಂ ಪೇಸಿದನೋ ॥ ೭೨

ಮದನನ ಮಾಱಿಂಕದ ಚಂ ।
ದದ ಗಂಡನನಮೃತದಂದದತ್ತೆಯನಿವಳೋ ॥
ವದೆ ಕೊಂದಳ್ ಪಾಪಂ ತಿ ।
ನ್ನದು ಪಾತಕಿ ಪುಟಿತೊಡಲ್ಲದೇಂ ಸತ್ತಪಳೇ ॥ ೭೩

ತೊನ್ನನ ಕೂಟದಿನಾದುದು ।
ತೊನ್ನೀ ರೋಗಕ್ಕೆ ಬಾಡುಕಳ್ ವಿಷಮೆನೆಯುಂ ॥
ಮನ್ನಿಸಳೆ ಮಗನ ಮಾತನಿ ।
ದೇಂ ನಾಯಕನರಕಮಿಾಕೆಗೊಚ್ಚತಮಾಯ್ತೋ ॥ ೭೪

---

ಮತಿಯು ಅಡುಗೆಯಮನೆಯಲ್ಲಿ ಕಟ್ಟಿದ್ದ (ಅಶುಚಿಯಾದ ಮಾಂಸವನ್ನು ಶುದ್ಧಿಮಾಡುವುದಕ್ಕಾಗಿ ತರಿಸಿದ್ದ ಹೋತ) ಹೋತನನ್ನು ತರಿಸಿ ಅದನ್ನು ತರಿದು ಮಾಂಸವನ್ನು ತರುವಂತೆ ಹೇಳಿದಳು. ಅದನ್ನು ಕತ್ತರಿಸುತ್ತಿದ್ದಾಗ ಅಮೃತಮತಿಯ ಸಖಿಯರು ಹೀಗೆ ಮಾತನಾಡಿಕೊಳ್ಳುತ್ತಿದ್ದರು.

೭೨. ಆ ಸಖಿಯರು ಅಮೃತಮತಿಯನ್ನು ನಿರ್ದೇಶಿಸಿ "ಮೈಯಲ್ಲಿ ಕೀವೂ ರಸಗೂ ಸುರಿಯುತ್ತಿದೆ. ದೇಹವೇ ಕುಷ್ಠರೋಗದಿಂದ ಹಾಳಾಗುತ್ತಿದೆ. ಇಂತಹ ಸ್ಥಿತಿಯಲ್ಲೂ ಸುಮ್ಮನಿರದೆ ಈ ನಾಯಂತೆ ಹೇಯವಾದವನ ಸಂಸರ್ಗದಲ್ಲಿರುವ ಈ ನೀಚಳನ್ನು ತೆಗೆದುಕೊಂಡು ಹೋಗಲು ಇವಳ ದುರ್ಗಂಧಕ್ಕೆ ಅಸಹ್ಯಪಟ್ಟು ಮೃತ್ಯುವೂ ಹತ್ತಿರಬರುತ್ತಿಲ್ಲವೋ ಏನೋ ? ಇಂತಹ ಪಾಪಿಷ್ಠೆಯನ್ನು ಯಮನೂ ಕೊಲ್ಲದೆ ಬಿಟ್ಟಿರುವನಲ್ಲಾ ?

೭೩. ಮನ್ಮಥನನ್ನು (ಹೀಯಾಳಿಸುವ) ಸುಂದರನಾಗಿದ್ದ ಗಂಡನನ್ನು ಅಮೃತದಂತೆ (ಹಿತಳಾಗಿದ್ದ) ಇದ್ದ ಅತ್ತೆಯನ್ನೂ ಪ್ರೀತಿಸದೆ ದ್ವೇಷದಿಂದ ಕೊಂದ ಇವಳನ್ನು ಪಾಪವು ತಿನ್ನುತ್ತಿಲ್ಲವಲ್ಲಾ ? ಈ ಪಾತಕಿಯು ಹುಳಿತಲ್ಲದೇ ಸಾಯುವಳೇ ?"

೭೪. "ಆ ತೊನ್ನನಾದ ಅಷ್ಟವಂಕನ ಸಂಸರ್ಗದಿಂದಿವಳಿಗೂ ತೊನ್ನುಹತ್ತಿದೆ. ತೊನ್ನುರೋಗಕ್ಕೆ ಮದ್ಯಮಾಂಸಗಳು ವಿಷದಂತೆ ಪರಿಣಮಿಸುತ್ತವೆಯೆಂದು ಮಗನು ಹೇಳಿದರೂ ಇವಳು ಕೇಳಳು. ಇವಳಿಗೆ ಎಂತಹ ದೊಡ್ಡನರಕವು ಕಾಯುತ್ತಿದೆಯೋ (ಏರ್ಪಟ್ಟಿದೆಯೋ ?) ಕಾಣೆವು".

ಎಂಬ ನುಡಿಗೇಳ್ದುಮೋಪಳ್ ।
ಪಾಣ್ಬನ ಕೂಡಿರ್ದನಣ್ಪುಗಂಡುಂ ತಮದಿಂ ॥
ದಂ ಬೆಂದು ಸತ್ತುದರೆಗೊ ।
ಯ್ದುಂಬುದಱಿಂ ನೊಂದು ಸತ್ತುದಿಲ್ಲಜಪೋತಂ ॥ ೭೫

ಆರೌದ್ರಹತಿಗೆ ತವೆ ಸಂ ।
ಸಾರಂ ತತ್ಪುರದ ಪೊಱಗೆ ಪುಟ್ಟಿದುವಂತಾ ॥
ಸೈರಿಭಮುಂ ಪೋಂತುಂ ಪೊಲ ।
ಗೇರಿಯ ಮಾದಿಗನ ಮನೆಯ ಕೋಟಿಯ ಬಸಿಱೊಳ್ ॥ ೭೬

ಕರಮೇೞ್ಗೆಯುಳ ಪಿಳ್ಳೆಗೆ ।
ಳೆರಡುಮನೋಲಗಿಸಿದಂ ನೃಪಂಗಲ್ಲಿಯ ಮಾ ॥
ದರನಿತ್ತು ಚಂಡಕರ್ಮಂ ।
ಗರಸನವಂ ನೋಡಿ ಸಲಹು ನೀನೆಂದಿತ್ತಂ ॥ ೭೭

---

೭೫. ಹೀಗೆ ಹೇಳುತ್ತಿದ್ದ ಮಾತುಗಳು ಆ ಕತ್ತರಿಸಲ್ಪಡುತ್ತಿದ್ದ ಹೋತನ ಕಿವಿಗೆ ಕೇಳಿಸಿತು. ಆಗ ಅದು ತನ್ನ ಹೆಂಡತಿಯು ಇನ್ನೂ ಆ ಜಾರನಲ್ಲಿಟ್ಟಿರುವ ಪ್ರೀತಿಯನ್ನು ತಿಳಿದು ಆ ದ್ವೇಷರೋಷಗಳಿಂದಲೇ ಬೆಂದು ಸತ್ತಿತೇ ವಿನಾ ಅದನ್ನು ಅರ್ಧಕ್ಕೆ ಕತ್ತರಿಸಿ ತಿಂದುದರಿಂದ ಸಾಯಲಿಲ್ಲವು. ಆ ಆಡಿಗೆ ಕತ್ತರಿಸಿದ ನೋವಿನಬಾಧೆಗಿಂತಲೂ ಆ ಹೆಂಡತಿಯ ಅಕಾರ್ಯದ ಸಂತಾಪವೇ ಹೆಚ್ಚಾಗಿದ್ದಿತು.

೭೬. ಆ ರೌದ್ರಧ್ಯಾನದಲ್ಲಿ ಜನ್ಮವನ್ನು ನೀಗಿದ ಆ ಹೋತನೂ ಮತ್ತು (ರಾಜನಿಂದ ಕೊಲ್ಲಿಸಲ್ಪಟ್ಟ) ಆ ಕೋಣನೂ ಊರಹೊರಗಿದ್ದ ಮಾದಿಗನೊಬ್ಬನ ಮನೆಯಲ್ಲಿ ಕೋಳಿಯಹೊಟ್ಟೆಯಲ್ಲಿ ಹೆಣ್ಣು ಗಂಡು ಕೋಳಿಗಳಾಗಿ ಹುಟ್ಟಿದುವು.

೭೭. ಬಹಳಚನ್ನಾಗಿ ಬೆಳೆಯುತ್ತಿದ್ದ ಆ ಕೋಳಿಯ ಮರಿಗಳೆರಡನ್ನೂ (ಸಾಕಿದ್ದ) ಆ ಮಾದಿಗರವನು ಅವನ್ನು ದೊರೆಗೆ ಕಾಣಿಕೆಯಾಗಿ ಒಪ್ಪಿಸಿ ಕೊಟ್ಟನು. ರಾಜನವನ್ನು ಸಲಹೆಂದು ಹೇಳಿ ತನ್ನ ತಳವಾರನಾದ ಚಂಡಕರ್ಮನಿಗೆ ಕೊಟ್ಟನು.

|| ಚಂಪಕಮಾಲಾ ||

ವಿಸರುಹದಂತೆ ಕೇಸರಮನಾಂತುದು ಮೆಯ್ಗಲಿಯಂತಿರಾರೆ ಕೂ ।
ರ್ಗೆಸೆದುದು ಚಾಗಿಯಂತೆ ನೆಱೆ ಕೊಟ್ಟೆಸೆದೊಪ್ಪಿತು ರಾಧೆಯಂತೆ ಸಂ ।
ದಿಸಿ ಮುಡಿ ಮೇಲೆ ಕೊಂಕಿದುದು ಚಂದ್ರಮನಂತೆ ಸುಪಕ್ಷದಿಂದೆ ರಂ ।
ಜಿಸಿದುದು ಪುಂಜನಗ್ಗದ ಸುವಸ್ತುವಿನಂತಿರೆ ತಟ್ಟು ಹೇಂಟೆಯೊಳ್ || ೭೮

|| ಮಾ ಲಿ ನಿ ||

ಅಭಯರುಚಿಕುಮಾರಂ ಮಾರಿದತ್ತಂಗೆ ಹಿಂಸಾ ।
ರಭಸಮತಿಗೆ ಸೈಸಿಂ ಪೇೞ್ದು ಧರ್ಮಕ್ಕೆ ತಂದೀ ।
ಶುಭಕಥನಮುತ್ಸ್ಯಾನಂದದಿಂ ಕೇಳ್ವ ಭವ್ಯ ।
ಪ್ರಭುಸಭೆಗೆಸೆದಿರ್ಕುಂ ಮಂಗಳಶ್ರೀವಿಲಾಸಂ || ೭೯

ಇದು ಪರಮಜಿನಸಮಯಕುಮುದಿನೀಶರಚ್ಚಂದ್ರಚೈತ್ರಚಂದ್ರಮ
ಸದಮಲರಾಮಚಂದ್ರಮುನೀಂದ್ರಪದಭಕ್ತ ಜಾನಕಿ
ಮಾಡಿದ ಯಶೋಧರಚರಿತ್ರದೊಳು
ದಾರಂ ತೃತೀಯಾವತಾರಂ ||

---

೭೮. ಆ ಕೋಳಿಗಳಲ್ಲಿ ತಾವರೆಯಂತೆ ಕೇಸರಗಳು ಶೋಭಿಸುವುವು, ಪರಾಕ್ರಮಿಯಂತೆ (ಆರೆಕೂರ್ಪು) ಕಾಲುಗರಚೂಪು ಮತ್ತು ಗರ್ಜನೆಯ ಕ್ರೌರ್ಯವು ಶೋಭಿಸುತ್ತಿರುವುದು, ತ್ಯಾಗಿಯಂತೆ ಕೊಟ್ಟು ಮೆರೆವುದು, ರಾಧೆಯಹಾಗೆ ತಲೆಯು ಮೇಲಕ್ಕೆತ್ತಲ್ಪಟ್ಟಿರುವುದು, ಚಂದ್ರನಂತೆ ಸುಪಕ್ಷ (ರೆಕ್ಕೆ) ದಿಂದ ರಂಜಿಸಿತು. ಹೀಗೆ ಶ್ರೇಷ್ಠವಾದ ವಸ್ತುವಿನಂತಿದ್ದ ಆ ಹುಂಜವು ಹೆಣ್ಣು ಕೋಳಿ (ತನ್ನಜೊತೆಯಲ್ಲಿ ಹುಟ್ಟಿದ್ದ) ಯೊಡನೆ ಪ್ರಕಾಶಮಾನವಾಗಿದ್ದಿತು.

೭೯. ಅಭಯರುಚಿಕುಮಾರನು ಹಿಂಸಾನಂದನಾಗಿದ್ದ ಮಾರಿದತ್ತನಿಗೆ ಪುಣ್ಯಕಥೆಯನ್ನು ಹೇಳಿ ಧರ್ಮಮಾರ್ಗಕ್ಕೆ ತಂದ ಈ ಶುಭಕಥನವನು ಸಂತೋಷದಿಂದ ಕೇಳುವ ಭವ್ಯರಾದ ರಾಜರಿಗೂ ಪ್ರಜೆಗಳಿಗೂ ಮಂಗಲವೂ ಸಂಪತ್ತೂ ಉಂಟಾಗಲಿ.

ಇದು ಜಿನಸಮಯ (ಮತ) ವೆಂಬ ಕನ್ನೈದಿಲೆಗೆ ಶರಚ್ಚಂದ್ರಚೈತ್ರಚಂದ್ರ
ರಾದ ಪರಿಶುದ್ಧರಾದ ರಾಮಚಂದ್ರಮುನೀಂದ್ರರ ಪದಭಕ್ತನಾದ ಜಾನಕಿ
(ಜನ್ನ) ಯು ಮಾಡಿದ ಯಶೋಧರಚರಿತ್ರೆಯ
ಕರ್ಣಾಟಕಾನುವಾದದಲ್ಲಿ
ಮೂರನೆಯ ಅವತಾರವು.



ಶ್ರೀ

# ಚತುರ್ಥಾವತಾರಂ

|| ಕಂದ ||

ರತಿವೆರಸು ಮನಸಿಜಂ ಬನ |
ದತಿಶಯಮಂ ನೋಡಲೆಂದು ಬರ್ಪಂತೆ ಯಶೋ ||
ಮತಿ ಕುಸುಮಾವಳಿವೆರಸು |
ನ್ನತಪೀತಚ್ಛತ್ರನಂದನಂ ನಡೆತಂದಂ || ೧

ಬಾಳಲರ್ಗುಡಿ ಪಿಕರುತಿ ಬಾ |
ಯ್ಕೇಳಿಕೆ ಮಾಂದಳಿರ ಕೆಂಪು ದೀವಿಗೆಯೆನೆ ಭೂ ||
ಪಾಳಂ ಬರೆ ಶೋಧಿಪ ವನ |
ಪಾಳನವೊಲ್ಮುಂದೆ ಬಂದುದಂದು ಬಸಂತಂ || ೨

ತಳಿರ್ಗಳ ಚಾಳೆಯುಮೆಳಲತೆ |
ಗಳರುತಿ ತಿಳಿಗೊಳದ ತೆರೆಯ ತಾಳಂ ಪೊಸಪೂ ||
ಗಳ ನೋಟವಾಗೆ ನೃಪನಂ |
ಮಳಯಾನಿಳನೆಂಬ ನಟ್ಟುವಂ ಕೇಳಿಸಿದಂ || ೩

---

|| ತಾತ್ಪರ್ಯ ||

೧. ಉನ್ನತವಾದ ಪೀತಛತ್ರದಿಂದಶೋಭಿಸುವ ಯಶೋಧರನ ಮಗನಾದ ಯಶೋಮತಿರಾಜನು ರಾಣಿ ಕುಸುಮಾವಳಿಯೊಡನೆ ಉದ್ಯಾನವನದ ಸೊಬಗನ್ನು ನೋಡುವುದಕ್ಕೆಂದು ರತಿಯೊಡನೆ ಬರುತ್ತಿರುವ ಮನ್ಮಥನಂತೆ ವನಕ್ಕೆ ಬಂದನು.

೨. ಲತೆಯಕುಡಿಗಳೇ (ಕಂಚುಕಿಗಳ ಸೊಂಟದಲ್ಲಿ ಜೋಲಾಡುವ) ಕತ್ತಿಗಳಂತೆಯೂ, ಕೋಗಿಲೆಯ ಧ್ವನಿಯೇ (ಮಾರ್ಗವನ್ನು ತಿಳಿಸುವ) ಕಂಚುಕಿಗಳ ಕೂಗಿನಂತೆಯೂ, ಮಾವಿನತಳಿರ ಕೆಂಪೇ ದೀಪದಂತೆಯೂ ತೋರುತ್ತಿರಲು ವಸಂತನು ಅಂದು ದೊರೆಯುಬರುವಾಗ, ಮಾರ್ಗವನ್ನು ಸರಿಮಾಡುತ್ತ ಮುಂದೆಮುಂದೆ ಹೋಗುವ ಮಾರ್ಗಶೋಧಕನಾದ ಭಟನಂತೆ ಬಂದನು (ವಸಂತರುತುವು ಬಂದಿದ್ದಿತೆಂದು ಭಾವವು).

೩. ಚಿಗುರುಗಳೇ ಚಡ್ಡಿ, ಎಳೆಲತೆಗಳ ಶಬ್ದವೇ ವಾದ್ಯ, ತಿಳಿಯಾದ ನೀರುಳ್ಳ ಕೊಳದತೆರೆಗಳೇ ತಾಳ, ಹೊಸಹೂವುಗಳೇ ನೋಟಕರು, ಎಂದು ತೋರುತ್ತಿರಲು ಮಲಯಾನಿಲನು ನಟ್ಟುವನಂತೆ ರಾಜನೆದುರಿಗೆ ನಾಟ್ಯವಾಡಿ ಸಂತೋಷಪಡಿಸುತ್ತಿರುವಂತೆ ತೋರುತ್ತಿದ್ದಿತು.

ಅಗೆವೊಯ್ದ ಚಂದ್ರಮಂಡಲ ।
ದಗೆಗಳವೊಲ್ ಕಾರಮುಗಿಲ ಕಿಱ್ಸರಿಗಳವೊಲ್ ॥
ಸೊಗಯಿಸಿದುವು ಬೆಳ್ಗೊಡೆ ಕೊಂ ।
ಬುಗೊಂಬಿನೊಳ್ ಕಂಬಗಂಬದೊಳ್ಸೈರ್ವಿಡಿಗಳ್ ॥ ೪

ಎಲೆ ಸುರಿದೆಲೆಗಳ ಕಣ್ ಕ ।
ಣ್ಣೆಲೆಯೆಡೆ ಗಂಟೊಡೆದು ಮೊನಸಿ ನನೆಕೊನೆದು ಮುಗು ॥
ಳ್ದಲರ್ದು ಮಱಿದುಂಬಿಗಂ ತೆಂ ।
ಬೆಲರ್ಗಂ ಮುದ್ದಾದುವಲ್ಲಿ ಪೊಸಮಲ್ಲಿಗೆಗಳ್ ॥ ೫

ಪೊಂಬಾಳೆ ಚಾಮರಂ ಚಂ ।
ದ್ರಂ ಬೆಳ್ಗೊಡೆ ಕೇಳಿಶಿಖರಿ ಸಿಂಹಾಸನಮಾ ॥
ಯ್ತೆಂಬಿನೆಗಮಂಗಜಂ ಮಾ ।
ವೆಂಬ ಕುಮಾರಂಗೆ ಪಟ್ಟಮಂ ಕಟ್ಟಿಸಿದಂ ॥ ೬

---

೪. ಮರಗಳ ಕೊಂಬುಕೊಂಬುಗಳ ಸಂದಿಯಲ್ಲಿ ಆನಿಸಿ ನಿಲಿಸಿದ್ದ ರಾಜನ ಬೆಳ್ಗೊಡೆಗಳು ಚಂದ್ರಮಂಡಲವನ್ನೇ ಅಗೆಹುಯಿದಿ (ಪೈರುಗಳನ್ನು ನಾಟೀ ಮಾಡುವುದಕ್ಕಾಗಿ ಒತ್ತಾಗಿ ಬೀಜಗಳನ್ನು ಬಿತ್ತಿರುವುದು) ರುವಂತೆಯೂ, ರಾಜನ ಬಿಡಾರದಲ್ಲಿರುವ ಕಂಬಕಂಬಗಳಲ್ಲಿಯೂ ಕಟ್ಟಿದ್ದ ಮದಜಲವನ್ನು ಸುರಿಸುವ ದೊಡ್ಡದೊಡ್ಡ ಆನೆಗಳು ಕಾರ್ಮೋಡಗಳನ್ನೇ ಸುರಿಯುವ ಮಳೆ ಯಂತೆಯೂ ಶೋಭಿಸುತ್ತಿದ್ದುವು.

೫. ಆ ವಸಂತರುತುವಿನಲ್ಲಿ ಮಲ್ಲಿಗೇಬಳ್ಳಿಗಳ ಹಣ್ಣೆಲೆಗಳು ಉದುರಿ ಹೋಗಿ, ಆ ಎಲೆಗಳಿದ್ದ ಸ್ಥಳದಲ್ಲಿ ಸಣ್ಣಸಣ್ಣಮೊಳಕೆಗಳು ಕಾಣಿಸಿಕೊಂಡು ಬಳಿಕ ಆ ಸ್ಥಳದಲ್ಲಿ ಗಂಟೆನಂತಾಗಿ ಅನಂತರ ಮೊನೆಯಾಗಿ ಮೊಗ್ಗುಬಿಟ್ಟು ಹೂವಾಗಿ ಅರಳಿದ ಮಲ್ಲಿಗೆಯ ಹೂವುಗಳು ಮರಿದುಂಬಿಗೂ ಮಲಯಾ ನಿಲಕ್ಕೂ ಅತ್ಯಂತವಾಗಿ ಪ್ರೀತಿಪಾತ್ರವಾಗಿದ್ದುವು. ( ಮ ಲ ಯಾ ನಿ ಲ ಸು ಹೂವಿನವಾಸನೆಯನ್ನೂ , ದುಂಬಿಯು ಮಕರಂದವನ್ನೂ ಪಾನಮಾಡುವುವು ಎಂದು ಭಾವ).

೬. ಆ ವಸಂತರುತುವಿನಲ್ಲಿ, ಹೊಂಬಾಳೆಗಳನ್ನೇ ಚಾಮರಗಳನ್ನಾಗಿಮಾಡಿ, ಚಂದ್ರನನ್ನೇ ಬೆಳ್ಗೊಡೆಯನ್ನಾಗಿಮಾಡಿ, ವನಗಳಲ್ಲಿರುವ ಕೃತಕಾದ್ರಿಗಳನ್ನೇ ಸಿಂಹಾಸನಗಳನ್ನಾಗಿಮಾಡಿ, ಮನ್ಮಥನು ಮಾವಿನಮರಕ್ಕೆ ಪಟ್ಟಾಭಿಷೇಕ ಮಾಡಿದ್ದಂತೆ ಕಾಣುತ್ತಿದ್ದಿತು. (ಉದ್ಯಾನದ ಕೃತಕಾದ್ರಿಗಳಮೇಲೆ ನಟ್ಟಿರುವ ಮಾವಿನಮರಗಳ ಪಕ್ಕದಲ್ಲಿ ತೆಂಗಿನಮರದ ಹೊಂಬಾಳೆಗಳೂ ತುದಿಯಲ್ಲಿ ಚಂದ್ರಮಂಡಲವೂ ಶೋಭಿಸುತ್ತಿದ್ದುವು).

ನಡೆನೋಡಲ್ ಕೇದಗೆಯಂ ||
ಪುಡೆದುವು ಮಲ್ಲಿಗೆಗೆ ಸೆಳ್ಳುಗುರ್ ಸಂಪಗೆಯಂ ||
ಪಡೆದುವು ಪಾದರಿಗೆನೆ ಸಂ |
ಗಡದಿಂದಲರ್ಗೊಯ್ವು ವಾರವನಿತೆಯರೆಸೆದರ್ || ೭

ಮಳಯಜದ ಮೊಲೆಯ ಕುಂಕುಮ |
ದಳಕದ ಕತ್ತುರಿಯ ಬಣ್ಣ ನಣ್ಣಿಗೆ ಕೊಳದೊಳ್ ||
ತಳರ್ದಿರೆ ಜಳರುಹಮುಖಿಯರ್ |
ಜಳಕೇಳಿಯ ನೆವದೆ ದೂಳಿಚಿತ್ರಂಬರೆದರ್ || ೮

ತೆರೆಮುಗಿಲನಡರ್ವ ವಿದ್ಯಾ |
ಧರಿಯೆಂಬಿನಮೊರ್ವಳೇಱ ಕೃತಕಾದ್ರಿಯನೇಂ ||
ದೊರೆಯಾದಳೊ ರತಿನಾಥನ |
ಕರುಮಾಡದ ಮದನಮೋಹಿನೀಪುತ್ರಿಕೆವೊಲ್ || ೯

---

೭. ಆ ವನದಲ್ಲಿ ರಾಜನ ಜೊತೆಯಲ್ಲಿ ಬಂದಿದ್ದ ಸ್ತ್ರೀಯರು ಗುಂಪು ಗುಂಪಾಗಿ ಹೂಕೊಯ್ಯುತ್ತಿರುವಾಗ ಅವರ ಕಡೆಗಣ್ಣಿನ ನೋಟದಿಂದ ಮಲ್ಲಿಗೆಯ ಹೂವುಗಳಿಗೆ ತಾಳೆಹೂವಿನ ಬಣ್ಣವುಂಟಾಗಿದ್ದಿತು. ಉಗುರುಗಳಿಂದ ಕೊಯ್ಯುವಾಗ ಉಗುರಿನ ಕೆಂಪುಬಣ್ಣದಿಂದ ಪಾದರಿಹೂವುಗಳಿಗೆ ಸಂಪಿಗೆ ಹೂವಿನ ಬಣ್ಣವುಂಟಾಗಿದ್ದಿತು. ಹೀಗೆ ಹೂವನ್ನು ಕೊಯ್ಯುವ ವಾರನಾರಿಯರು ಶೋಭಾಯಮಾನರಾಗಿದ್ದರು.

೮. ಹೀಗೆ ಅವರು ಹೂಗೊಯ್ದುಬಳಿಕ ಕೊಳದಲ್ಲಿ ನೀರಾಟಕ್ಕೆ ಬಂದುಸೇರಿದರು. ಅಲ್ಲಿ ತಾವರೆಹೂವಿನಂತೆ ಮುಖವುಳ್ಳವರಾಗಿದ್ದ ಸ್ತ್ರೀಯರು ಹಚ್ಚಿಕೊಂಡಿದ್ದ ಶ್ರೀಗಂಧ, ಕುಚಗಳಿಗೆ ಹಚ್ಚಿಕೊಂಡಿದ್ದ ಚಂದನ ಮತ್ತು ಅವರ ಕುರುಳಿನ ಸಮೀಪದಲ್ಲಿದ್ದ ಕಸ್ತೂರಿತಿಲಕ ಇವುಗಳ ಹುಡಿಯ ಭಿನ್ನಭಿನ್ನವಾದ ಬಣ್ಣಗಳು ನೀರಿನೊಡನೆ ಸೇರಿರಲು, ಅವರು ಜಲಕೇಳಿಯ ನೆವದಿಂದ ಧೂಳೀಚಿತ್ರವನ್ನು ಬರೆಯುತ್ತಿರುವಂತೆ ತೋರುತ್ತಿದ್ದಿತು.

೯. ವಿದ್ಯಾಧರಿಯೊಬ್ಬಳು ಮೋಡಗಳ ತೆರೆಯನ್ನನುಸರಿಸಿ ಮೇಲಕ್ಕೆ ಹತ್ತಿ ಹೋಗುತ್ತಿರುವಳೋ ಎನ್ನುವಹಾಗೆ ಓರ್ವ ವಾರಸ್ತ್ರೀಯು ವನದಲ್ಲಿದ್ದ ಕೃತಕಾದ್ರಿಯನ್ನು ಹತ್ತಿ ತುದಿಯಲ್ಲಿ ನಿಂತು ಮನ್ಮಥನ ಕರುಮಾಡಲ್ಲಿರುವ ಮದನಮೋಹಿನಿಯ ಬಿಂಬ ಸಮಾನವಾಗಿಕಾಣುತ್ತಿದ್ದಳು.

ಬೆಳವತಿಗೆವಸದನಮೆಸೆದಿರೆ ।
ತಳಿರ್ಜೊಂಪಲೊಳುಯ್ಯಲಾಡಿ ಮೆಱೆದಳದೊರ್ವಳ್ ॥
ಜಳಜದ ಮಣಿಮಂಟಪದೊಳ ।
ಗೆಳವೆಱೆಯಂ ತೂಗಿ ತೊಟ್ಟಿಲೊಳ್ ಸಾರ್ಚಿದವೊಲ್ ॥ ೧೦

ಕೊಳದೊಳಗೋಲಾಡಿ ತಳಿ ।
ರ್ತಳವಮಾವಿನೊಳುಯ್ಯಲಾಡಿ ನರಪತಿ ಕುಸುಮಾ ॥
ವಳಿಯೊಳ್ ರತಿರಾಗದಿನೋ ।
ಕುಳಿಯಾಡಿ ವಿಳಾಸಗೊಷ್ಠಿಯೊಳ್ ಕುಳ್ಳಿರ್ದಂ ॥ ೧೧

ಗರಟಿಗೆಗಿತ್ತಲ್ ತದ್ವನ ।
ಪರಿಸರದೊಳ್ ಬರುತುಮಿರ್ದಕಂ ಪನರೆಂಬರ್ ॥
ತರುಮೂಲದೊಳಿರೆ ನಿಧಿಯಂ ।
ಕುರುಡಂ ಕಾಣ್ಬಂತೆ ಚಂಡಕರ್ಮಂ ಕಂಡಂ ॥ ೧೨

---

೧೦. ಶ್ವೇತವಸ್ತ್ರಧಾರಿಯಾದೊಬ್ಬ ಸ್ತ್ರೀಯು, ಮುತ್ತು ವಜ್ರಗಳ ಆಭರಣಗಳನ್ನುತೊಟ್ಟು ತಳಿರಜೊಂಪೆಗಳಲ್ಲಿ ಉಯ್ಯಾಲೆಯಾಡುತ್ತಿದ್ದುದು ತಾವರೆ ಹೂವಿನಿಂದಾದ ಮಣಿಮಂಟಪದಲ್ಲಿ ಬಾಲಚಂದ್ರನನ್ನು ತೊಟ್ಟಿಲಿನಲ್ಲಿ ಮಲಗಿಸಿ ತೂಗುವಂತೆ ತೋರುತ್ತಿದ್ದಿತು.

೧೧. ಆ ಯಶೋಮತಿರಾಜನು ತನ್ನಸತಿಯೊಡನೆ ಆ ವಾರನಾರಿಯರ ಜೊತೆಯಲ್ಲಿ ಜಲಕ್ರೀಡೆಯಾಡಿ, ಚಿಗುರಿರುವ ಮಾವಿನಮರದಲ್ಲಿ ಉಯ್ಯಾಲೆಯಾಡಿ (ತನ್ನ ಸತಿಯೊಡನೆ) ಕಾಮಸುಖವೆಂಬ ನೀರಿನಲ್ಲಿ ಓಕುಳಿಯಾಡಿ ಸ್ತ್ರೀಯರೊಡನೆ ವಿಲಾಸದಲ್ಲಿ ಮಗ್ನನಾಗಿದ್ದನು.

೧೨. ಆ ಸಂದರ್ಭದಲ್ಲಿ ಗಸ್ತಿಗೆಂದು ಸರದಿಯ ಕಾವಲಿನ ನಿಯಮದಿಂದ ಆ ವನದ ಸಮೀಪದಲ್ಲಿ ಬರುತ್ತಿದ್ದ ಯಶೋಮತಿಯ ತಳವಾರ ಚಂಡಕರ್ಮನು ಅಲ್ಲೊಂದು ಮರದ ಬುಡದಲ್ಲಿದ್ದ ಅಕಂಪನರೆಂಬ ಮುನಿಯನ್ನು, ಕುರುಡನು ನಿಧಿಯನ್ನು ಕಂಡಂತೆ ನೋಡಿದನು. (ಕುರುಡನಂತೆ ಅಜ್ಞಾನಿಯಾದ ಆ ತಳವಾರನು, ನಿಧಿಯಂತೆ ಜ್ಞಾನಿಯಾದ ಆ ಮುನಿಯನ್ನು ಕಂಡನು. ಕುರುಡನಿಗೆ ನಿಧಿಯು ಹತ್ತಿರವಿದ್ದರೂ ಕಾಣುವ ಶಕ್ತಿಯಿಲ್ಲ ಮತ್ತು ಆ ನಿಧಿಯನ್ನು ಉಪಯೋಗಿಸಿಕೊಳ್ಳುವ ತಿಳಿವೂ ಇಲ್ಲ. ಅದರಂತೆ ಈತನು ಆ ಜ್ಞಾನಿಯನ್ನು ನೋಡಿದರೂ ಅವನಿಂದ ಸದ್ಗತಿದಾಯಕವಾದ ಉಪದೇಶವನ್ನು ಪಡೆಯಬೇಕೆಂಬ ಅರಿವಿರಲಿಲ್ಲವೆಂದು ಭಾವವು).

ಮನಮಿರೆ ಪುರ್ಬಿನ ಮೊದಲೊಳ್ ।
ಮನದೊಳಗಿರೆ ವಾಯು ಕರಣತತಿ ವಾಯುವಿನೊಳ್ ॥
ಕುನಿದಿರೆ ಪದ್ಮಾಸನದೊಳ್ ।
ತನುವಿರೆ ಯೋಗೀಂದ್ರನಾತ್ಮಚಿಂತೆಯೊಳಿರ್ದಂ ॥ ೧೩

ಎಱಗಿದನಾತಂ ಗೌರವ ।
ಮಱಿಯದೆಯುಂ ದೀಪವರ್ತಿ ನಿಧಿಗಾಣ್ಬುದುಮೊ ॥
ಲ್ದೆಱಗುವ ತೆಱದಿಂ ಮುನಿಕ ।
ಣ್ದೆಱೆದೊಯ್ಯನೆ ನೋಡಿ ಪರಸೆ ಬೞಕಿಂತೆಂದಂ ॥ ೧೪

ಎಲೆ ದೇವರೆ ಪುತ್ತುಂ ಬ ।
ತ್ತಲೆಯುಂ ಬೞದಿಲ್ಲವೆಂಬರದುಕಾರಣದಿಂ ॥
ನೆಲೆಯೊಂದೆಯನಚ್ಚಿದವೋ ।
ಲೆಲೆಮಿಡುಕದೆ ನೆನೆಯುತಿರ್ದಿರೇನಂ ಮನದೊಳ್ ॥ ೧೫

---

೧೩. ಆ ಮುನಿಯು ಹುಬ್ಬಿನಮೊದಲಲ್ಲಿ ನೆಟ್ಟ ಮನಸ್ಸುಳ್ಳವನಾಗಿ, ಮನಸ್ಸಿನಲ್ಲಡಗಿಸಲ್ಪಟ್ಟವಾಯುವುಳ್ಳವನಾಗಿ, ವಾಯುವಿನಲ್ಲಿ ಸೇರಿಹೋಗಿದ್ದ ಇಂದ್ರಿಯವ್ಯಾಪಾರವುಳ್ಳವನಾಗಿ ಶರೀರವನ್ನು ಪದ್ಮಾಸನದಲ್ಲಿಟ್ಟವನಾಗಿ ಆತ್ಮಚಿಂತನೆ (ಧ್ಯಾನ) ಯಲ್ಲಿ ಮಗ್ನನಾಗಿದ್ದನು.

೧೪. ಆ ಮುನಿಯ ಯೋಗ್ಯತೆ (ಗುಣಗೌರವ) ಯನ್ನು ತಿಳಿಯಲಾರದವನಾಗಿದ್ದರೂ, ಯಾವಾಗಲೂ ಮೇಲುಮುಖನಾಗಿಯೇ ಉರಿಯುವ ದೀಪದ ಕುಡಿಯು ನಿಧಿಯಿರುವ ಸ್ಥಳದಲ್ಲಿ ಕೆಳಮುಖವಾಗುವಂತೆ ಅವರಿಗೆ ಬಗ್ಗಿ ನಮಸ್ಕಾರಮಾಡಲು ಅವರು ಕಣ್ಣುತೆರೆದು ಅವನನ್ನು ಆಶೀರ್ವಾದ ಮಾಡಿದರು. ಅನಂತರ ಅವನು ಅವರನ್ನು ಕುರಿತು ಹೀಗೆಂದು ಕೇಳಿದನು.

೧೫. "ಎಲೆ ಸ್ವಾಮಿ ! ಬತ್ತಲೆಯಾಗಿದ್ದು ಮೈಮೇಲೆ ಹುತ್ತಬೆಳೆಯುವಷ್ಟು ಕಾಲ ಧ್ಯಾನಾಸಕ್ತರಾಗಿರುವುದು ವ್ಯರ್ಥವಾದ ಕಾರ್ಯವೆಂದು ನಮ್ಮಂತಹ ಹಲವರು ಹೇಳುವರು. ಆದುದರಿಂದ ನೀವು ಅಳ್ಳಾಡದೆ ಕುಳಿತು ಏನನ್ನು ಧ್ಯಾನಿಸುವಿರಿ (ನಿಮ್ಮಾ ಧ್ಯಾನದಿಂದ ಪ್ರಯೋಜನವೇನು ?) ಎಂದು ಪ್ರಶ್ನೆ ಮಾಡಿದನು. (ಇಲ್ಲಿ ಪುತ್ತುಂಬತ್ತಲೆಯೆಂದು ಹೇಳಿರುವುದು —ನಿರ್ಗ್ರಂಥರಾದ ಯತಿಗಳು ಬಹುಕಾಲ ಧ್ಯಾನದಲ್ಲಿ ಕುಳಿತಿರುವಾಗವರ ಮೈಮೇಲೆ ಹುತ್ತಬೆಳೆದರೂ ಲಕ್ಷಿಸುವುದಿಲ್ಲ; ಇದು ಸಾಮಾನ್ಯವಾದ ಶಕ್ತಿಯಲ್ಲ. ಮತ್ತು ಬೆತ್ತಲೆಯಾಗಿರುವುದೂ ಸುಲಭವಲ್ಲ— ಆದ್ದರಿಂದ ಜೈನಯತಿಗಳು ಮಹತ್ತಾದ ಶಕ್ತಿಯುಳ್ಳವರೆಂದು ಪ್ರತೀತಿಯುಂಟು. ಇದನ್ನು ತಿಳಿಯದ ತಳವಾರನು ಹಾಗೆ ಪ್ರಶ್ನೆಮಾಡಿದನು).

ಅವಧರಿಸಿಕೇಳ್ವುದುಂ ತ |
ನ್ಮವಧಿಯಿನಾಸನ್ನಭವ್ಯನೆಂಬುದನಱಿದಿಂ ||
ದವಗಿಂತು ನುಡಿದರಾತ್ಮನ |
ನವಿಕಲನಂ ನೆನೆಯುತಿರ್ದೆವೆನೆ ಮತ್ತಾತಂ || ೧೬

ಆವೆಡೆಯೊಳಿರ್ಪನಾತ್ಮಂ |
ಗಾವುದು ಕುಱುಪೆಂದೊಡಂಗಿಯಂಗದೊಳೆಲ್ಲಂ ||
ತೀವಿರ್ಪಂ ಭೂತಚತು |
ಷ್ಟಾವಯವದಿನನ್ಯನಾತ್ಮನತಿಚೈತನ್ಯಂ || ೧೭

ಎಂದೊಡೆ ತಳಾಱನಾಯಕ |
ನೆಂದಂ ನೀವೆಂದಮಾತು ಪೊಲ್ಲದು ನೋಡ ||
ಲ್ಕೆಂದು ಪಲರಂ ವಿಚಾರಿಸಿ |
ಕೊಂದೆಂ ತನುವಲ್ಲದಾತ್ಮನಂ ಕಂಡಱಿಯೆಂ || ೧೮

---

೧೬. ಹೀಗೆ ಅತ್ಯಂತಶ್ರದ್ಧೆಯಿಂದವರನ್ನು ಕೇಳಿದ ಆ ತಳವಾರನನ್ನು ನೋಡಿ ಅವರು ತಮ್ಮ ಅವಧಿಜ್ಞಾನದಬಲದಿಂದವನು ಆಸನ್ನಭವ್ಯ (ಸಮ್ಯಕ್ತ್ವವನ್ನು ಹೊಂದಲೂ, ಮುಂದೆ ಮೋಕ್ಷವನ್ನು ಸಂಪಾದಿಸಲೂ ಶಕ್ತಿಯುಳ್ಳ ಜೀವ) ನೆಂದು ತಿಳಿದವರಾಗಿ ಅವನನ್ನು ಕುರಿತು "ಅಯ್ಯಾ! ನಾವು ಅವಿಕಾರನಾದ (ಮಲರಹಿತನಾದ ಅಥವ ಕಲಂಕವಿಲ್ಲದವನಾದ) ಆತ್ಮನನ್ನು ಕುರಿತು ಚಿಂತಿಸುತಿದ್ದೆವು, (ಧ್ಯಾನಮಾಡುತ್ತಿದ್ದೆವು) ಎಂದುತ್ತರಕೊಟ್ಟರು.

೧೭. ಬಳಿಕವನು "ಆತ್ಮನಾವ ಸ್ಥಳದಲ್ಲಿರುವನು? ಅವನಿಗೆ ಗುರುತೇನು?" ಎಂದು ಕೇಳಲು ಅವರವನಿಗೆ "ಅಂಗಿಯಾದ ಆತ್ಮನು ತನ್ನ ಅಂಗವಾದ ದೇಹದಲ್ಲೆಲ್ಲಾ ತುಂಬಿರುವನು. ಪೃಥಿವ್ಯಪ್ತೇಜೋವಾಯುಗಳೆಂಬ ನಾಲ್ಕುಭೂತರೂಪವಾದ ದೇಹದಿಂದ ಅನ್ಯನು (ಬೇರೆಯವನಾಗಿಯೇ ಇರುವವನು) ಮತ್ತು ಸಂಪೂರ್ಣವಾದ ಚೈತನ್ಯಶಕ್ತಿಯುಳ್ಳವನು" ಎಂದು ಹೇಳಿದರು. (ಪ್ರಾಣಿಗಳಲ್ಲಿ ದೇಹವೂ ಆತ್ಮನೂ ಭಿನ್ನಭಿನ್ನಗಳು ಎಂದು ಭಾವವು. ನಾಸ್ತಿಕರು ಹೇಳುವಂತೆ ದೇಹಾತ್ಮಗಳಿಗೆ ಅಭೇದವಿಲ್ಲವು).

೧೮. ಆ ಮಾತಿಗೆ ಆ ತಳವಾರನು "ನೀವು ಹೇಳಿದಮಾತು ಸರಿಯಲ್ಲ (ನಿಜವಲ್ಲ). ಆತ್ಮನುಂಟೇ? ಎಂದು ಎಷ್ಟೋ ಜನರನ್ನು ಕೇಳಿದೆ. ಅವರು ಉಂಟೆಂದು ಹೇಳಿದರು. ಅದನ್ನು ನೋಡಬೇಕೆಂದು (ಪರೀಕ್ಷಿಸಬೇಕೆಂದು) ಪ್ರಾಣಿಗಳನ್ನು ಕೊಂದುನೋಡಿದೆ. ಅಂತಹಮನುಷ್ಯನಲ್ಲಿ ಶರೀರವಲ್ಲದೆ ಬೇರೆ ಆತ್ಮನನ್ನು ಕಾಣಲಿಲ್ಲ (ನೋಡಿದಹಾಗೆ ತೋರಲಿಲ್ಲ)".

ಕಡಿದು ಕಿಱಿಕಿಱಿದನೆಲುವಂ |
ಪುಡಿಗುಟ್ಟಿಸಿ ತೊವಲನುಗಿದು ಕರುಳ ತೊಡಂಕಂ ||
ಬಿಡಿಸಿ ನಡೆನೋೞ್ಪೆನೊಳಗೆ |
ಲ್ಲಡಗಿರ್ಪುದು ಜೀವನಿರ್ದಡೆಲ್ಲಿಗೆವೋದಂ || ೧೯
ಕುದಿರೊಳ್ ಕಳ್ಳನನಿಕ್ಕಿಸಿ |
ಸೊದೆಯಿಂಟ್ಟರೆಬಳಿದು ಬೞಿಕ ತೆಱೆದೊಳಗಂ ನೋ ||
ಡಿದೊಡಾತ್ಮನಿಲ್ಲ ತನುವಿ |
ರ್ಪುದು ಬೇಱಿಂಬಾತ್ಮನಂ ನೆಲಂ ನುಂಗಿದುದೊ || ೨೦
ತೂಗಿಸಿ ತೊಲೆಯೊಳ್ ಬಾಯುಂ |
ಮೂಗುಮನಡೆಯೊತ್ತಿ ಕೊಂದ ಕಳ್ಳನದೇಹಂ ||
ತೂಗಿದೊಡೆ ಕುಂದದಾತ್ಮವಿ |
ಭಾಗಂ ಬೇಱಿಲ್ಲ ಜೀವನೆಂತುಂ ದೇಹಂ || ೨೧
ಎಂದೊಡೆ ದಂಡಧರಂಗಿಂ |
ತೆಂದರ್ಗುರುಗಳ್ ವಿಮೋಹವ್ಯಗವುಂ ಮಿಥ್ಯಾ ||
ಕಂದರದೊಳ್ ಬೆದಱಿಟ್ಟುವ |
ದುಂದುಭಿರವದಂತಿರೊಗೆಯೆ ಗಂಭೀರರವಂ || ೨೨

---

೧೯. ಪ್ರಾಣಿಗಳನ್ನು ಸಣ್ಣಸಣ್ಣಚೂರಾಗಿ ಕತ್ತರಿಸಿ ಹಿಸಿಕಿಹಿಸಿಕಿ ನೋಡಿದೆನು, ಮೂಳೆಯನ್ನು ಪುಡಿಮಾಡಿನೋಡಿ ಚರ್ಮವನ್ನು ಸುಲಿದು, ಕರುಳ ಗಂಟನ್ನು ಬಿಚ್ಚಿ, ಚೆನ್ನಾಗಿ ನೋಡಿದೆ. ಆತ್ಮನು ಕಾಣಲಿಲ್ಲ. ಹೀಗೆ ಮಾಡಿದರೂ ಆತ್ಮವಿದ್ದರೆ ಆ ಆತ್ಮನೆಲ್ಲಿ ಅವಿತುಕೊಂಡಿರುವನು ? ಸತ್ತಪ್ರಾಣಿಗಳ ದೇಹವನ್ನು ಬಿಟ್ಟು ಎಲ್ಲಿಗೆ ಹೋದನು ?"

೨೦. "ಗುಳಿಯೊಳಕ್ಕೊಬ್ಬ ಕಳ್ಳನನ್ನು ತಳ್ಳಿಸಿ ಗುಳಿಯಬಾಯನ್ನು ಗಾರೆಯಿಂದ ಭದ್ರವಾಗಿ ಮುಚ್ಚಿ ಇಟ್ಟದ್ದು ಬಳಿಕ ತೆಗೆದು ನೋಡಿದರೆ ಆತ್ಮನಿರುವುದಿಲ್ಲ; ಶರೀರಮಾತ್ರವಿರುತ್ತದೆ. ಶರೀರದಿಂದ ಆತ್ಮನು ಬೇರೆ ಎಂದರೆ ಅದನ್ನು ಆ ನೆಲವು ನುಂಗಿಬಿಟ್ಟಿತೋ ?"

೨೧. "ಕಳ್ಳನನ್ನು ತಕ್ಕಡಿಯಲ್ಲಿಟ್ಟು ತೂಕಮಾಡಿಸಿ ಬಾಯನ್ನೂ ಮೂಗನ್ನೂ ಭದ್ರವಾಗಿ ಒತ್ತಿಹಿಡಿದು ಕೊಂದು ಆ ಸತ್ತ ದೇಹವನ್ನು ತೂಕ ಮಾಡಿ ನೋಡಿದರೆ ತೂಕವು ಕಮ್ಮಿಯಾಗುವುದಿಲ್ಲ. ಆತ್ಮಬೇರೆ ದೇಹಬೇರೆ ಎಂಬ ವಿಭಾಗವಿಲ್ಲ. ಆದುದರಿಂದ ಹೇಗಾದರೂ ಜೀವನೇ ದೇಹವಲ್ಲದೆ ದೇಹಕ್ಕೆ ಬೇರೆಯಾದ ಜೀವವಿಲ್ಲ."

೨೨. ಹೀಗೆಂದು ಹೇಳಲು ಆ ತಳವಾರನಿಗೆ ( ದಂಡಧರ ) ಗುರುಗಳು

ತಱಿದೊಡೆ ಕಡಿದೊಡೆ ಸೀೞ್ದೊಡೆ ।
ಪೊಱಮಡುವುದೆ ಕಿಚ್ಚು ಕಾಷ್ಠದಿಂ ಪೊಸೆಯಲೊಡಂ ।।
ಪೊಱಮಡುವುದಂತೆ ಜೀವಂ ।
ಪೆಱತೊಡಲಿಂ ತೋಱುಗುಂ ವಿವೇಕಕ್ರಿಯೆಯಿಂ ।। ೨೩

ಕುದಿರೊಳಗಿರ್ದೂದಿದ ಶಂ ।
ಖದದನಿ ನಿಶ್ಛಿದ್ರಮಾದೊಡಂ ಪೊಣ್ಮದೆ ಶಂ ।।
ಖದಿನನ್ಯವಲ್ಲದೇಂ ಪೊ ।
ಣ್ಮಿದ ನಾದಂ ಕಾಯದಿಂದೆ ಜೀವನುಮನ್ಯಂ ।। ೨೪

ತೀವಿದ ತಿದಿಯಂ ತೂಗಿಯು ।
ಮಾವಾಯುವನಿೞಿಪಿ ತೂಗೆ ಕುಂದದ ತಿದಿಯಿಂ ।।
ದಾವಾಯು ಬೇಱೆ ತನುವಿಂ ।
ಜೀವಂ ಬೇಱೆಂದು ಮಗನೆ ಭಾವಿಸಿನೋಡಾ ।। ೨೫

---

"ಮಿಥ್ಯಾತ್ವವೆಂಬ ಗುಹೆಯಲ್ಲಡಗಿರುವ ಮೋಹವೆಂಬ ಮೃಗವನ್ನು ಬೆದರಿಸಿ ಹೊರಕ್ಕಟ್ಟುವ ನಗಾರಿ (ತಮಟೆ) ಯ ಧ್ವನಿಯೋ ಎಂಬಂತೆ ತೋರುವ ಹಾಗಿದ್ದ ಗಂಭೀರವಾದ ಧ್ವನಿಯುಳ್ಳವರಾಗಿ,

೨೩. "ಕತ್ತರಿಸಿದರೂ, ತುಂಡುಮಾಡಿದರೂ, ಎರಡುಭಾಗಮಾಡಿದರೂ ಸೌದೆಯಿಂದ ಬೆಂಕಿಯು ಹೊರಡುವುದೆ? ಆದರೆ ಒಂದೊಂದನ್ನು ಮಸೆದರೆ (ಒಂದರಿಂದೊಂದನ್ನು ತೀಡಿದರೆ) ಬೆಂಕಿಯು ಹುಟ್ಟಿ ಕಾಣಿಸಿಕೊಳ್ಳುವುದು. ಹಾಗೆಯೇ ವಿವೇಕವಾದ ಕಾರ್ಯಗಳಿಂದ ಜೀವವು ಶರೀರದಿಂದ ಬೇರೆಯಾಗಿ ಕಾಣುವುದು."

೨೪. "ಗುಳಿಯೊಳಗಿದ್ದು ಊದಿದ ಶಂಖಧ್ವನಿಯು ಸಂದಿಲ್ಲದಿದ್ದರೂ ಹೊರಕ್ಕೆ ಕೇಳಿಬರುವುದಿಲ್ಲವೇ? ಹೊರಕ್ಕೆ ನುಗ್ಗಿ ಬಂದ ಆ ಶಬ್ದವು ಶಂಖದಿಂದ ಬೇರೆಯಲ್ಲವೆ ಏನು? ಅಂತೆಯೇ ಶರೀರದಿಂದ ಜೀವನು ಬೇರೆ.

೨೫. ಗಾಳಿತುಂಬಿದ ತಿದಿಯನ್ನು ತೂಕಮಾಡಿ ನೋಡಿ ಮತ್ತದರ ಗಾಳಿಯನ್ನು ಇಳಿಸಿ (ಹೊರಕ್ಕೆಬಿಟ್ಟು) ತೂಕಮಾಡಿ ನೋಡಿದರೆ ಸರಿತೂಕವಾದ ಆ ತಿದಿಯಿಂದ ವಾಯುವು ಬೇರೆಯಾಗಿರುವಂತೆ ದೇಹದಿಂದ ಆತ್ಮನು ಬೇರೆ ಓ ಮಗನೆ! ಈ ವಿಚಾರವನ್ನು ಚೆನ್ನಾಗಿ ಯೋಚಿಸಿನೋಡು."

ಏದೊರೆಯನಾತ್ಮನೆಂದೊಡ ।
ನಾದಿಯನಂತಂ ನಿರತ್ಯಯಂ ಚಿನ್ಮಯ ನಿಃ ॥
ಪ್ರಾದೇಶಿಕನೆಂದಾತನು ।
ಪಾದೇಯಂ ಮುಕ್ತಿಮುಕ್ತನುಂ ಪರಮಾತ್ಮಂ ॥ ೨೬

ಕಲ್ಲೊಳ್ ಪೊರ್ ಪಾಲೊಳ್ ಘೃತ ।
ಮಿಲ್ಲೆನವೇಡುಂಟು ದೇಹದೊಳಗಾತ್ಮನದೇ ॥
ಕಿಲ್ಲ ಕುರುಡಂಗೆ ತೋಱದೊ ।
ಡಿಲ್ಲಪ್ಪುದೆ ವಸ್ತು ಭೇದಿಪಂಗಾತ್ಮನೊಳಂ ॥ ೨೭

ಮಾಡುವವನಾತ್ಮ ನೆಟ್ಟನೆ ।
ಮಾಡಿದುದುಣ್ಬಾತನಾತ್ಮನಘಜಲಧಿಯೊಳೋ ॥
ಲಾಡುವೊಡಂ ಗುಣಗಣದೊಳ್ ।
ಕೂಡುವೊಡಂ ಜನ್ಮಜಲಧಿಯಂ ದಾಂಟುವೊಡಂ ॥ ೨೮

ಪರಮಾತ್ಮನೆನ್ನನೆಂದೊಡೆ ।
ಚರಮಾಂಗಪ್ರಮಿತನಖಿಳಲೋಕಸಮಾನಂ ॥
ನಿರವಯವ ನಿರಂಜನ ನಿ ।
ರ್ದುರಿತನನಂತಪ್ರಬೋಧದರ್ಶನಸೌಖ್ಯಂ ॥ ೨೯

---

೨೬. "ಆದುದರಿಂದ ಈಗ ಆತ್ಮನ ನಿಜಸ್ವರೂಪವನ್ನು ಹೇಳುವೆನು ಕೇಳು. ಆತ್ಮನು ಎಂತಹವನೆಂದರೆ– ಅವನಿಗೆ ಮೊದಲೂ ಇಲ್ಲ ಕೊನೆಯೂ ಇಲ್ಲ; ಅವನು ಎಂದೂ ನಾಶವಿಲ್ಲದವನು, ಜ್ಞಾನಸ್ವರೂಪನು. ನಿಯತವಾದ ಪ್ರದೇಶದಲ್ಲಿ ಇರುವವನಲ್ಲ, ಹೀಗಿರುವುದರಿಂದ ಆತ್ಮನು ಸ್ವೀಕರಿಸಲ್ಪಡಲು ಯೋಗ್ಯನು. ಇಂತಹ ಆತ್ಮನು ಮುಕ್ತಿಯನ್ನು ಹೊಂದಿದವನು. ಅವನೇ ಪರಮಾತ್ಮನೆನಿಸಿಕೊಳ್ಳುವವನು.

೨೭. "ಮತ್ತು ಪರಮಾತ್ಮನೆಂತಹವನೆಂದರೆ, ಕೇಳು– ಅವನು ಚರಮಾಂಗಪಮಿತ್ರನು (ದೇಹಪ್ರಮಾಣವುಳ್ಳವನು), ಸರ್ವಲೋಕ ಸಮಾನನು, ಅವಯುವಗಳಿಲ್ಲದವನು, ಕಪ್ಪಿಲ್ಲದವನು (ನಿರ್ಮಲನು), ಪಾಪಲೇಹವಿಲ್ಲದವನು, ಅನಂತವಾದ ದರ್ಶನ ಜ್ಞಾನ ವೀರ್ಯ ಸುಖಗಳುಳ್ಳವನು."

೨೮. ಕಲ್ಲಿನಲ್ಲಿ ಚಿನ್ನವೂ, ಹಾಲಿನಲ್ಲಿ ತುಪ್ಪವೂ ಇಲ್ಲವೆನ್ನಬೇಡ; ಉಂಟು. ದೇಹದಲ್ಲಾತ್ಮನೇಕಿಲ್ಲ– ಇರುವನು. ಕುರುಡನಿಗೆ ಕಾಣಿಸದಿದ್ದರೆ ವಸ್ತುವೇ ಇಲ್ಲವೆಂದಾಗುವುದೆ? ಭೇದಿಸಿ ವಿಚಾರಮಾಡುವವನಿಗೆ (ಬೇರೆಯಾಗಿ ನೋಡಬಲ್ಲವನಿಗೆ) ಆತ್ಮನಿರುವನು.

೨೯. "ಕಾರ್ಯಮಾಡುವವನು ಆತ್ಮನು. ನೇರವಾಗಿ ಮಾಡಿದ್ದರ ಫಲ

ಕೇವಲವಿಬೋಧನೇತ್ರಂ ।
ದೇವನೆ ಪರಮಾತ್ಮನಾಗಮಂ ತದ್ವಚನಂ ॥
ಜೀವದಯೆ ಧರ್ಮಮೆಂಬೀ ।
ಭಾವನೆಯಿಂ ನೆಱೆಯೆ ನಂಬುವುದು ಸಮ್ಯಕ್ತ್ವಂ ॥ ೩೦

ಕೊಲಲಾಗದು ಪುಸಿಯಾಗದು ।
ಕಳಲಾಗದು ಪೆಱರ ಪೆಂಡಿರೊಳ್ ತನ್ನ ಮನಂ ॥
ಸಲಲಾಗದು ತೀರದುದ ।
ಕ್ಕಲವರಲಾಗದು ಪರತ್ರೆಯಂ ಬಯಸುವವಂ ॥ ೩೧

ಇವು ಮೊತ್ತಮೊದಲಣುವ್ರತ ।
ಮಿವುಮುಸುಳದೆ ನಡೆವೊಡೈಹಿಕಾಮುತ್ರಿಕಮೆಂ ॥
ಬಿವಱೊಳ್ ಸಲೆ ಸುಖಿಯಪ್ಪಂ ।
ಭವಭವದೊಳ್ ದುಃಖಿಯಪ್ಪಮಿವು ಮಸುಳ್ದಾತಂ ॥ ೩೨

ಮಾಡಿದ ಕೋೞಿಯನಟ್ಟಿದ ।
ಕರ್ಮಡಿ ಯಶೋಧರಂ ಚಂದ್ರಮತಿಯಿಂತಿರ್ಬರ್ ॥
ಗೂಡಿನ ಕೋೞಿಗಳಾದರ್ ।
ನೋಡೈ ಮತ್ತೊರ್ಮೆ ಬೞಿಲಿ ತಿರ್ಯಗ್ಗತಿಯೊಳ್ ॥ ೩೩

---

ವನ್ನನುಭೋಗಿಸುವವನೂ ಅವನೇ. ಪಾಪಸಮುದ್ರದಲ್ಲಿ ಮುಳುಗಾಡುವವನೂ, ಸದ್ಗುಣಸಮೂಹವನ್ನು ಹೊಂದುವವನೂ, ಭವಸಾಗರವನ್ನು ದಾಟುವವನೂ ಅವನೇ (ಆತ್ಮನೇ).

೩೦. "ಕೇವಲಜ್ಞಾನವೆಂಬ ನೇತ್ರವನ್ನು ಹೊಂದಿರುವ ಪರಮಾತ್ಮನೇ ದೇವಾಧಿದೇವನು. ಅವನ ವಚನವೇ ಆಗಮ (ಶಾಸ್ತ್ರ). ಜೀವಿಗಳಲ್ಲಿ ದಯೆ ತೋರಿಸುವುದೇ ಧರ್ಮ. ಹೀಗೆಂಬ ಭಾವನೆಗಳಿಂದಕೂಡಿ ನಂಬುವುದೇ ಸಮ್ಯಕ್ತ್ವವೆನಿಸಿಕೊಳ್ಳುವುದು.

೩೧. "ಆದುದರಿಂದ ಮುಕ್ತಿಸುಖವನ್ನು ಅಪೇಕ್ಷಿಸುವವನು, ಕೊಲ್ಲಬಾರದು, ಹುಸಿಯಾಡಬಾರದು, ಕಳಬಾರದು, ಪರರ ಸ್ತ್ರೀಯರಲ್ಲಿ ಮನವಿಡಬಾರದು, ಸಾಧ್ಯವಾಗದಿರುವ ವಸ್ತುವಿಗೆ ಆಶೆಪಡಬಾರದು.

೩೨. ಈ ವ್ರತಗಳೈದೂ ಮೊದಲನೆಯ ಅಣುವ್ರತವೆನಿಸಿಕೊಳ್ಳುವುವು. ಇವುಗಳನ್ನು ಕೆಡಿಸಿಕೊಳ್ಳದೆ ನಡೆಸುವವನು ಇಹಪರಗಳೆರಡರಲ್ಲೂ ಸಂಪೂರ್ಣವಾದ ನಿಜವಾದ ಸುಖವನ್ನು ಪಡೆಯುವನು. ಇವು ತಪ್ಪಿದರೆ (ಮಾಸಿಹೋದರೆ) ಜನ್ಮಜನ್ಮಗಳಲ್ಲಿಯೂ ದುಃಖಪಡುವನು."

೩೩. ಕೃತಕವಾದ ಕೋಳಿಯೊಂದನ್ನು ಕೊಂದು ಸಂಪೂರ್ಣವಾಗಿ ನಾಶ

ವ್ರತಹಾನಿ ಹಿಂಸೆಯೊಂದೀ |
ಗತಿಗಿಕ್ಕಿದುದುೞಿದ ನಾಲ್ಕುಮಾದೊಡೆ ಬೞಿಕೇಂ ||
ಚತುರಂಗಬಲಸಮೇತಂ |
ಪ್ರತಿಪಕ್ಷಂ ಶೂರನಾದೊಡೇನಂ ಮಾಡಂ || ೩೪

ಅದಱಿಂ ತನ್ನಂತಿರೆ ಬಗೆ |
ವುದು ಪೆಱರಂ ಪ್ರಾಣಿಹಿಂಸೆಯಂ ಮಾಡಲ್ವೇ ||
ಡ ದಯಾಮೂಲಂ ಧರ್ಮಂ |
ಪದುಳಿಸಿ ಕೇಳ್ಮಗನೆ ಹಿತಮಿದುಭಯಭವಕ್ಕಂ || ೩೫

ಗುರುವಿಂತು ಬೆಸಸೆ ಜಾತಿ |
ಸ್ಮರಂಗಳಾಗಿರ್ದ ಪಕ್ಕಿಗಳ್ ಕೇಳ್ದರ್ದೆಯೊಳ್ ||
ಪರಮೋತ್ಸವದಿಂ ವ್ರತಮಂ |
ಧರಿಯಿಸುತಿರೆ ಚಂಡಕರ್ಮನುಂ ಧರಿಯಿಸಿದಂ || ೩೬

ಕೞಲೆ ನಿಜಹರ್ಷಬಾಷ್ಪದ |
ಮೞೆವನಿ ಧರ್ಮಾನುರಾಗಮೇಘಧ್ವನಿವೋಲ್ ||
ಮೊೞಗುವಿನಮೆಱಂಕೆಯ ಪೊಯ್ |
ಘಳಿಲನೆ ಕೂಗಿದುವು ಕೇಳ್ದನಿತ್ತ ನೃಪಾಲಂ || ೩೭

---

ಹೊಂದಿ, ಯಶೋಧರ ಚಂದ್ರಮತಿಯೆಂಬಿಬ್ಬರು ಹಲವುಜನ್ಮಗಳಲ್ಲಿ ತಿರ್ಯಂಚಪ್ರಾಣಿಗಳಾಗಿ ಹುಟ್ಟಿ ನೊಂದು ಕೊನೆಗೆ ಒಂದುಸಾರಿ ಎಂದರೆ ಈಗ ಗೂಡಿನಕೋಳಿಗಳಾಗಿ ಹುಟ್ಟಿರುವರು.”

೩೪. “ಹಿಂಸಾವ್ರತದೊಂದರನಾಶವೇ ಈ ದುಃಸ್ಥಿತಿಗೆ ತಂದುಹಾಕಿದಮೇಲೆ ಉಳಿದ ನಾಲ್ಕುವ್ರತಗಳೂ ನಾಶವಾದರೆ ಬಳಿಕ ಹೇಳಬೇಕಾದುದೇನು? ಶತ್ರುವು ಚತುರಂಗಸೈನ್ಯಸಮೇತನೂ ಪರಾಕ್ರಮಿಯೂ ಆದರೆ ಏನನ್ನುತಾನೇ ಮಾಡನು?”

೩೫. “ಆದುದರಿಂದ ಎಲೆ ಮಗನೆ! ಕೇಳು; ತನ್ನಂತಯೇ ಇತರರನ್ನೂ ನೋಡು. ಪ್ರಾಣಿಹಿಂಸೆ ಮಾಡಬೇಡ. ದಯೆಯೇ ಮೂಲವಾಗುಳ್ಳ ಧರ್ಮವು ಸುಖವನ್ನುಂಟುಮಾಡುವುದು. ಇದು ಇಹಪರಗಳೆರಡಕ್ಕೂ ಹಿತವಾದುದು.”

೩೬. ಹೀಗೆಂದು ಹೇಳಿದ ಆ ಅಕಂಪನ ಮುನಿಗಳ ಮಾತನ್ನು ಕೇಳಿದ ಚಂಡಕರ್ಮನ ಬಳಿಯಲ್ಲಿದ್ದ ಎರಡು ಕೋಳಿಗಳೂ ಜಾತಿಸ್ಮರಗಳಾಗಿ ಪರಮಸಂತೋಷವನ್ನು ಹೊಂದಿ ಆ ಪಂಚಾಣುವ್ರತಗಳನ್ನು ಕೈಕೊಂಡುವು. ಚಂಡಕರ್ಮನೂ ಆ ವ್ರತಗಳನ್ನು ಧರಿಸಿದನು.

೩೭. ಹೀಗೆ ವ್ರತವನ್ನುಧರಿಸಿ ಸಂತೋಷಗೊಂಡ ಆ ಕೋಳಿಗಳೆರಡಕ್ಕೂ

ಸ್ವರವೇಧಿವಿದ್ಯೆಯಂ ತ |
ನ್ನರಸಿಗೆ ಮೆಱೆಯಲ್ಕೆ ದೇವಿ ನೋಡೆನುತೆಚ್ಚಂ ||
ಶರಮೆಯ್ದಿಸೆ ಕೆಡೆದುವುಮಂ |
ತೆರಡರ್ಕಾಯುಃಪ್ರಮಾಣಮೊಂದಾದುದೆನಲ್ || ೩೮

ದೊರೆಕೊಳೆ ಸಮಾಧಿಮರಣಂ |
ಚರಣಾಯುಧಯುಗಳಮಟಿದು ಕುಸುಮಾವಳಿಯಿಂ ||
ಬರಸಿಯ ಬಸಿಱೊಳ್ ಬಂದುವು |
ನರಯುಗಳಕಮಾಗಿಯಚ್ಚಿನಚ್ಚೊತ್ತಿದವೊಲ್ || ೩೯

ಅಭಯಮತಿಯಭಯರುಚಿಯೆಂ |
ಬಭಿಧಾನದೆ ಚಂದ್ರಮತಿಯಶೋಧರರಮಳ್ಗಳ್ ||
ಶುಭಲಕ್ಷಣಮೊಪ್ಪುತ್ತಿರೆ |
ಸ್ವಭಾವಸಿದ್ಧಂಗಳಾಗಿ ಬಳೆಯುತ್ತಿರ್ದುಂ || ೪೦

---

ಆನಂದಾಶ್ರುಗಳೆಂಬ ಮಳೆಯಹನಿಗಳು ಸುರಿಯುತ್ತಿರಲು ಧರ್ಮಾನುರಾಗ ವೆಂಬ ಮೇಘವು ಧ್ವನಿಮಾಡಿದಂತೆ ತಮ್ಮ ರೆಕ್ಕೆಗಳನ್ನು ಬಡಿಯುತ್ತ ತತ್ ಕ್ಷಣ ಘಟ್ಟಿಯಾಗಿ ಕೂಗಿಕೊಂಡುವು. ಸಮೀಪದಲ್ಲೇ ವಿಲಾಸಗೋಷ್ಠಿಯಲ್ಲಿದ್ದ ಯಶೋಮತಿರಾಜನು ಈ ಕೋಳಿಗಳ ಕೂಗನ್ನು ಕೇಳಿದನು.

೩೮. ತನ್ನ ಸ್ವರವೇಧ (ಶಬ್ದವನ್ನು ಗುರಿಮಾಡಿ ಬಾಣವನ್ನು ಪ್ರಯೋಗಿಸು ವುದು) ವಿದ್ಯೆಯ ಚಾತುರ್ಯವನ್ನು ತನ್ನ ರಾಣಿ ಕುಸುಮಾವಳಿಗೆ ತೋರಿಸು ವುದಕ್ಕಾಗಿ ಕೋಳಿಗಳಕೂಗನ್ನು ಗುರಿಮಾಡಿ ಬಾಣಪ್ರಯೋಗಮಾಡಿದನು. ಎರಡಕ್ಕೂ ಆಯಸ್ಸು ಒಂದೇ ಸಮವಾದುದೆನ್ನುವಂತೆ ಎರಡೂ ಸತ್ತುವು.

೩೯. ಸಮಾಧಿಮರಣವುಂಟಾದುದರಿಂದ (ಶುಭವಾದ ಪರಿಣಾಮದಿಂದ ವ್ರತದಲ್ಲೇ ಇದ್ದು ಮರಣಹೊಂದುವುದಕ್ಕೆ ಸಮಾಧಿಮರಣವೆಂದು ಹೆಸರು) ಆ ಎರಡು ಕೋಳಿಗಳೂ ಸತ್ತು ಆ ಕುಸುಮಾವಳಿಯ ಹೊಟ್ಟೆಯಲ್ಲೇ ಅಚ್ಚೊ ತ್ತಿದಂತೆ ಒಂದೇ ಹೋಲಿಕೆಯುಳ್ಳ ಅವಳಿಮಕ್ಕಳಾದರು.

೪೦. ಆ ಯಶೋಧರಚಂದ್ರಮತಿಗಳು ಅಭಯಮತಿ ಅಭಯರುಚಿಯೆಂಬ ಹೆಸರಿನಿಂದ ಅವಳಿಮಕ್ಕಳಾಗಿ ಶುಭಲಕ್ಷಣಗಳಿಂದ ಕೂಡಿದವರಾಗಿ ಸಹಜ ವಾಗಿ ಬೆಳೆಯುತ್ತಿರುವರು.

ನುಣ್ಣುರುಳ ಪೊಳೆವ ಕರ್ಪುಂ ।
ಕಣ್ಗಳ ಮಾದರಮೆ ? ಮೆಯ್ಯ ಬೆಳಗೆನವಿನೆಗಂ ॥
ಪೆಣ್ಗಂಡು ರಾಜ್ಯಲಕ್ಷ್ಮಿಯ ।
ಕಣ್ಗಳ ದೊರೆಯಾಗಿ ಸಮನೆ ಬಳೆವಿನಮಿರ್ತ್ತಲ್ ॥ ೪೧

ಬೇಂಟೆಗೆ ನಡೆಯೆ ಯಶೋಮತಿ ।
ಗೆಂಟರೊಳಾರಣ್ಯವಾಸಿಗಳ್ ನಿಲೆ ಕಂಡಾ ॥
ಬೇಂಟೆ ಪರಿಯದೊಡೆ ಬಿನದದ ।
ಕಂಟಕನೀ ಸವಣನೆನುತೆ ಬರುತುಂ ಮುನಿದಂ ॥ ೪೨

ಮುನಿದೈನೂಱುಂ ಕುನ್ನಿಗ ।
ಳನಿತುಮನೊರ್ಮೊದಲೆ ತೋಱೆ ಕುಕ್ಕುರಿಸೆ ಮಹಾ ॥
ಮುನಿ ತಳರದೆ ಮೇರುವೊಲಿರೆ ।
ವನಮೃಗದವೊಲುರ್ಕನುೞಿದು ಸುೞಿದುವು ನಾಯ್ಗಳ್ ॥ ೪೩

ಆ ಯತಿಗಾಯುತಿಗಿಡೆ ಕೌ ।
ಳೇಯಕತತಿ ನೃಪತಿ ಕೆಳರ್ದು ಮುಳಿದುರ್ಚಿದ ಕೌ ॥
ಕ್ಷೇಯಕದೆ ಪೊಯ್ಯಲೆಯ್ದೆ ವಿ ।
ನೇಯಂ ಕಲ್ಯಾಣಮಿತ್ರನೆಂಬಂ ಪರದಂ ॥ ೪೪

---

೪೧. ನುಣ್ಣಗಿರುವ ಕುರುಳುಗಳ ಹೊಳೆಯುವ ಕಪ್ಪುಬಣ್ಣದಿಂದಲೂ, ಕಣ್ಣುಗಳಿಗೆ ಅತ್ಯಂತಮನೋಹರವಾಗಿರುವ ಅವರ ಮೈಯಿನ ಕಾಂತಿ ಯಿಂದಲೂ ಕೂಡಿದ ಆ ರಾಜಕುಮಾರಕುಮಾರಿಯರು ರಾಜ್ಯಲಕ್ಷ್ಮಿಯ ಎರಡು ಕಣ್ಣುಗಳಿಗೆ ಸರಿಹೋಲುತ್ತ ಸಮನಾಗಿ ಬೆಳೆಯುತ್ತಿದ್ದರು.

೪೨. ಇತ್ತಲಾಗಿ ಯಶೋಮತಿಯೊಂದುದಿನ ಬೇಟೆಗೆಂದು ಹೊರಟವನು ಬರುತ್ತ ಅರಣ್ಯವಾಸಿಗಳಾದ ಅಕಂಪನಮುನಿಗಳು ಅದೂರದಲ್ಲೊಂದೆಡೆ ಇದ್ದುದನ್ನು ಕಂಡು ಬೇಟೆಗೆಹೋಗಿ ತನಗೆ ಬೇಟೆಯಲ್ಲಿ ಯಾವಪ್ರಾಣಿಯೂ ಸಿಕ್ಕದೇಹೋಗಲು ತನ್ನ ವಿನೋದಕ್ಕೆ ಆ ಸವಣನು (ಜೈನಸನ್ಯಾಸಿ) ಕಂಟಕ ನಾದನೆಂದು ಭಾವಿಸುತ್ತ ಕೋಪದಿಂದ ಆ ಮುನಿಯಿದ್ದಸ್ಥಳಕ್ಕೆ ಬಂದನು.

೪೩. ಕೋಪಗೊಂಡಿದ್ದ ಯಶೋಮತಿಯು ಆ ಮುನಿಯನ್ನು ಕೊಲ್ಲಲು ತನ್ನ ಐನೂರು ನಾಯಿಗಳನ್ನೂ ಆ ಮುನಿಯಮೇಲೆ ಬಿಟ್ಟನು. ಅವು ಮೇಲೆ ಬೀಳಲು ಬಂದು ಸುತ್ತಿಕೊಂಡರೂ ಆ ಮುನಿಯು ಮೇರುಪರ್ವತದಂತೆ ಚಲಿಸದೆ ನಿಂತಿರಲು ಆ ನಾಯಿಗಳೆಲ್ಲವೂ ಆಕ್ರಮಿಸುವ ಶಕ್ತಿಗುಂದಿ ಜಿಂಕೆ ಗಳಂತೆ ಸುತ್ತಲೂ ಸುತ್ತಾಡುತ್ತಿದ್ದುವು.

೪೪. ತನ್ನ ನಾಯಿಗಳ ಸಮೂಹವೇ ಆ ಮುನಿಗೆ ಸೋತು ನಿಂತುದನ್ನು

ಕೆಮ್ಮನೆ ಬಾಳಂ ಕಿತ್ತೈ ।
"ಕಿಂಮಿತ್ರಂ ಯನ್ನಿವರ್ತಯತಿ ಪಾಪಾತ್ತಿಂ" ॥
ದಾಂ ಮಾಣಿಸದೊಡೆ ಕೋಟಲೆ ।
ಯಂ ಮಾಡವೆ ದೇವ ನಿನಗೆ ದುರಿತಶತಂಗಳ್ ॥ ೭೫

ಪೊಡಮಡಲೆತ್ತುವ ಕೈಗಳ್ ।
ಪೊಡೆಯಲ್ಕೆತ್ತುಗುಮೆ ಮೂಱುಲೋಕದ ಕೈಗ ॥
ನ್ನಡಿ ಸಾಮರ್ಥ್ಯದ ಸದ್ಗುಣ ।
ದೊಡೆಯರೊಳದು ತಕ್ಕುದಲ್ಲ ದಕ್ಕಿಡು ಬಾಳಂ ॥ ೭೬

ಆ ರುಷಿಯ ಚರಣಕಮಲಮ ।
ನಾರಾಧಿಸಲೆಂದು ಬಂದು ಕಂಡೆಡೆವೊಕ್ಕು ॥
ರ್ವೀರಮಣ "ದುರ್ಬಳಸ್ಯಬ ।
ಳೋರಾಜಾ" ಯೆನ್ನದಿವರ್ಗೆ ಮುಳಿವುದೆ ಮರುಳೇ ॥ ೭೭

---

ನೋಡಿ ರಾಜನು ಕೆರಳಿ ಒರೆಯಿಂದೆಳೆದಕತ್ತಿಯಿಂದವರನ್ನು ಹೊಡೆಯಲು ದ್ಯುಕ್ತನಾಗಲು ಅದನ್ನು ನೋಡಿದ ಜೊತೆಯಲ್ಲಿದ್ದ ಕಲ್ಯಾಣಮಿತ್ರನೆಂಬ ಶ್ರೇಷ್ಠಿಯು,

೭೫. "ಎಲೆ ರಾಜನೆ ! ಸುಮ್ಮನೇಕೆ ಕತ್ತಿಯನ್ನೆಳೆದೆ ? 'ಕಿಂ ಮಿತ್ರಂ ಯನ್ನಿವರ್ತಯತಿ ಪಾಪಾತ್' (ಪಾಪದದೆಶೆಯಿಂದಾವನು ಹಿಂದಿರುಗಿಸುವನೋ ಅವನೇ ಸ್ನೇಹಿತನು) ಎಂಬಂತೆ ನಾನು ನಿನ್ನನ್ನು ಈ ಪಾಪಕಾರ್ಯದಿಂದ ನಿವಾರಿಸದಿದ್ದರೆ ಪಾಪಕೋಟಿಯು ನಿನ್ನನ್ನು ಹಿಂಸೆಪಡಿಸದೆ ಬಿಡುವುವೇ ?

೭೬. "ಓ ರಾಜನೆ ! ಕೇಳು, ಈ ಮುನಿಗಳನ್ನು ನಮಸ್ಕರಿಸುವುದಕ್ಕೆ ಎತ್ತಬೇಕಾದ ಕೈಗಳನ್ನು ಅವರನ್ನು ಹೊಡೆಯುವುದಕ್ಕೆತ್ತುವುದೇ ? ಅವರು ಮೂರುಲೋಕಕ್ಕೂ ಕೈಗನ್ನಡಿಯಂತಹವರು, ಅತ್ಯಂತಶಕ್ತಿಯುಳ್ಳವರು, ಸದ್ಗುಣಗಳೊಡೆಯರು, ಅಂತಹವರ ವಿಷಯದಲ್ಲಿ ಹಾಗೆ ಮಾಡುವುದು ಸರಿಯಲ್ಲ; ಕತ್ತಿಯನ್ನು ಒರೆಯೊಳಕ್ಕೆ ಸೇರಿಸು."

೭೭. "ಓ ರಾಜನೆ ! ಕೇಳು, ಈ ಮುನೀಶ್ವರರ ಪಾದಪದ್ಮಗಳನ್ನು ಪೂಜಿಸುವುದಕ್ಕೆಂದು ಬಂದು ನೋಡಿ ಸಮೀಪಕ್ಕೆಹೋಗಿ "ದುರ್ಬಳಸ್ಯ ಬಳೋ ರಾಜಾ" "ಅಸಹಾಯಕರಿಗೆ ರಾಜನೇ ಸಹಾಯಕನು" ಎಂಬ ಭಾವನೆಯಿಂದ ಕನಿಕರಪಡದೆ, ಎಲೆ ಭ್ರಾಂತನೇ ಅವರಮೇಲೆ ಕೋಪಮಾಡಿ ಅವರನ್ನು ಕೊಲ್ಲಲು ಯತ್ನಿಸಬಹುದೇ ?" ಎಂದು ಕೇಳಿದನು.

ಇವರಾರೆಂದಿರ್ದಪೆ ನೀಂ ।
ಭುವನತ್ರಯತಿಳಕರಮಳಸದ್ಬೋಧಸುಧಾ ॥
ರ್ಣವಪೂರ್ಣಚಂದ್ರರವನತ ।
ದಿವಿಜನರೋರಗಗಳನನ್ಯಸಾಮಾನ್ಯಗುಣರ್ ॥ ೪೮

ಅಱಿಯದೆ ಗೆಯ್ದಿಂ ಕ್ಷಮೆಯೆಂ ।
ದೆಱಗೆನೆ ನೃಪನೆಂದನಾವ ಜಾತಿಯದಾರೆಂ ॥
ದಱಿಯದೆ ಮಿಂದು ಮುಟ್ಟುಂಕಿಯು ।
ಮಱಿಯದ ಮಣಕಿನ ಬಣಂಬೆಗಾನೆಱಗುವೆನೇ ॥ ೪೯

ಒಂದುಮೃಗಂ ಬೀೞದು ನೋ ।
ಡಿಂದಿನ ಬೇಂಟೆಯೊಳೆ ಸಿಂಟನಂ ಕಂಡುದಱಿಂ ॥
ದೆಂದೊಡೆ ಪರದಂ ಪಾಪಂ ।
ಸಂಧಿಸುವುದೆ ಪುಣ್ಯಮೂರ್ತಿಯಂ ಕಾಣಲೊಡಂ ॥ ೫೦

ತನುವಾರ್ಗಮಶುಚಿ ಶುದ್ಧಾ ।
ತ್ಮನೆ ಶುಚಿ ಕಾಗೆಯುವೊಲೇನೊ ಮಿಂದವನೇಂ ಶು ॥
ದ್ಧನೆ "ಸಂಸ್ಕಾರಶತೇನಾ ।
ಪಿ ನಗೂಥಃ ಕುಂಕುಮಾಯತೇ" ಯೆಂಬುದಱಿಂ ॥ ೫೧

---

೪೮. "ನೀನು ಇವರನ್ನು ಯಾರೆಂದು ತಿಳಿದಿರುವೆ? ಇವರೇನು ಸಾಮಾನ್ಯರಾದ ಬಡರುಷಿಯಲ್ಲ. ಮೂರುಲೋಕಕ್ಕೂ ತಿಲಕಪ್ರಾಯರು. ನಿರ್ಮಲ ಜ್ಞಾನಾಮೃತಸಾಗರಕ್ಕೆ ಚಂದ್ರಸಮಾನರು (ಅಪಾರವಾದ ನಿರ್ಮಲಜ್ಞಾನವುಳ್ಳವರು). ನಮಸ್ಕರಿಸಲ್ಪಟ್ಟ ದೇವನಾಗನರಸಮೂಹವುಳ್ಳವರು ಮತ್ತು ಇನ್ನಾರಲ್ಲೂ ಕಾಣಲಾಗದಂತಹ ಅಸಾಮಾನ್ಯಗುಣಗಳುಳ್ಳವರು."

೪೯. "ಈಗ ನೀನು 'ನಾನು ತಿಳಿಯದೆ ಮಾಡಿದೆನು. ಕ್ಷಮೆಯನ್ನು ನೀಡಿ' ಎಂದು ಹೇಳಿ ಅವರಿಗೆ ನಮಸ್ಕರಿಸು" ಎಂದನು. ಅದಕ್ಕೆ ರಾಜನು "ಇವರಾವ ಜಾತಿಯೋ? ಇವರಾರೋ? ತಿಳಿಯದೆ, ಸ್ನಾನಮಾಡುವುದನ್ನೇ ತಿಳಿಯದ ದುರ್ಗಂಧದ ಮುದ್ದೆಯಂತಿರುವ ಈತನಿಗೆ ನಾನು ನಮಸ್ಕರಿಸುವೆನೇ?

೫೦. "ಈ ಕೊಳಕನನ್ನು ನೋಡಿದುದರಿಂದಲೇ ಇಂದು ಬೇಟೆಯಲ್ಲಿ ಒಂದು ಮೃಗವೂ ಬೀಳಲಿಲ್ಲ" ಎಂದು ರಾಜನು ಹೇಳಲು ಅದಕ್ಕೆ ಕಲ್ಯಾಣಮಿತ್ರನು "ಪುಣ್ಯಮೂರ್ತಿಗಳಾದಿವರನ್ನು ಕಂಡಮೇಲೆ ಪಾಪವು (ಬೇಟೆಯಲ್ಲಿ ಪ್ರಾಣಿ ಹಿಂಸೆಮಾಡುವುದು) ಬಂದು ಸೇರುವುದೇ?

೫೧. "ದೇಹವು ಎಲ್ಲರಿಗೂ ಅಶುಚಿಯೋ. ಶುದ್ಧಾತ್ಮನೇ ಶುಚಿಯಾಗಿರುವ

ಗಂಗಕುಲಚಕ್ರವರ್ತಿಕ ।
ಳಿಂಗಧರಾಧೀಶರಿವರಸಾರಂ ಸಂಸಾ ॥
ರಂ ಗಡಮೆಂದಱಿತಱಿತು ತ ।
ಪಂಗೆಯ್ದರ್ನಾಮದಿಂ ಸುದತ್ತಾಚಾರ್ಯರ್ ॥ ೫೨

ಎಂಬುದಮುರಸಂ ಮುನಿವರ ।
ರಂ ಬಲಗೊಂಡೆಱಗಿ ನೆಗಟ್ದಿ ಪೊಲ್ಲಮೊಗೆ ತದೀ ॥
ಯಾಂಬುಜಪದಮುಂ ತನ್ನ ಶಿ ।
ರೋಂಬುಜದಿಂದರ್ಚಿಸಲ್ಪರಿಚ್ಛೇದಿಸಿದಂ ॥ ೫೩

ಅದನವರವಧಿಯಿನಱಿದಾ ।
ಗದು ಬೇಡೆನೆ ಮತ್ತೆ ನೃಪತಿ ವಿಸ್ಮಯದಿಂ ಕೇ ॥
ಳ್ವುದುಮುಸಿರ್ದರ್ ಭವದೊಳ್ ಬ ।
ರ್ದಿದ ಮಾತರಪಿತರರಂ ಪಿತಾಮಹರಿರವಂ ॥ ೫೪

---

ವನು. ಕಾಗೆಯಹಾಗೆ ನೀರಿನಲ್ಲಿ ಮಿಂದವನೇನು ಶುದ್ಧನಾಗುತ್ತಾನೆಯೇ? 'ಅಮೇಧ್ಯವನ್ನು ಹಲವುಬಗೆಯಲ್ಲಿ ಸಂಸ್ಕರಿಸಿದರೂ (ಸಂಸ್ಕಾರಮಾಡಿದರೂ) ಅದುಹೇಗೆತಾನೆ ಕುಂಕುಮಕೇಸರಿಯಾದೀತು' " ಎಂದುತ್ತರವಿತ್ತು,

೫೨. "ಇವರು ಗಂಗಕುಲಚಕ್ರವರ್ತಿಗಳು. ಕಳಿಂಗದೇಶಾಧಿಪರು." ಸಂಸಾರವು ನಿಸ್ಸಾರ (ಸುಖಹೀನ) ವಾದುದು ಎಂದು ಚೆನ್ನಾಗಿ ತಿಳಿದು, ತಪಸ್ಸು ಮಾಡುತ್ತಿರುವವರು. ಇವರ ಹೆಸರು ಸುದತ್ತಾಚಾರ್ಯರೆಂದು" ಎಂದು ಮತ್ತೆ ಹೇಳಿದನು.

೫೩. ಹೀಗೆಂದು ಕಲ್ಯಾಣಮಿತ್ರನು ಹೇಳಲು ರಾಜಯಶೋಮತಿಯು ಆ ಸುದತ್ತಾಚಾರ್ಯರನ್ನು ಪ್ರದಕ್ಷಿಣೆಮಾಡಿ ನಮಸ್ಕರಿಸಿ, ಅವರ ಚರಣಕಮಲಗಳನ್ನು ತನ್ನ ತಲೆಯೆಂಬ ಪದ್ಮದಿಂದರ್ಚಿಸಲು ನಿಶ್ಚಯಿಸಿದನು (ಅಥವಾ ತನ್ನ ತಲೆಯನ್ನು ಕಡಿದವರ ಕಾಲಿಗಿಡಲು ಸಿದ್ಧನಾದನು. ಎಂದರೆ ತಾನು ಅವರನ್ನು ಕೊಲ್ಲಲು ಯತ್ನಿಸಿದ ಪಾಪಕ್ಕೆ ತನ್ನನ್ನು ಕೊಂದುಕೊಳ್ಳುವುದೇ ತಕ್ಕುದು ಎಂದು ಭಾವಿಸಿದನು).

೫೪. ಅವಧಿಜ್ಞಾನದಿಂದವರವನ ಮನೋಭಿಪ್ರಾಯವನ್ನು ತಿಳಿದು "ಬೇಡ ಅದಾಗದು" ಎಂದು ಹೇಳಲು, ರಾಜನು ಆಶ್ಚರ್ಯದಿಂದ ಕೂಡಿದವನಾಗಿ ಅವರನ್ನು (ಏಕೆಂದು) ಪ್ರಶ್ನೆಮಾಡಲು ಅವರು ಜನ್ಮಾಂತರದಲ್ಲಿ ಸತ್ತ ಅವನ ತಂದೆ ತಾಯಿ ಅಜ್ಜ ಇವರ ಸ್ಥಿತಿಯನ್ನು ವರ್ಣಿಸಿದರು.

ವೀರತಪಸ್ವಿ ಯಶೌಘಮ |
ಹಾರಾಜಂ ನೋಂತು ಕಱಿದು ಸುರವರ ವನಿತಾ ||
ಸ್ಮೇರಕಟಾಕ್ಷನಿರೀಕ್ಷಣ |
ಕೈರವಶೀತಾಂಶು ದೇವನಾದಂ ದಿವದೊಳ್ || ೫೫

ಅಮೃತಮತಿಯಷ್ಟವಂಕಂ |
ಗೆ ಮರುಳ್ಗೊಂಡತ್ತೆಗಂಡರಂ ವಿಷದಿಂ ಕೊಂ ||
ದು ಮುದಿರ್ತು ಯಮುಂ ಕೊಲೆ ಪಂ |
ಚಮನರಕದೊಳಟ್ಟಿಳರಸ ಧೂಮಪ್ರಭಯೊಳ್ || ೫೬

ಜನಕಂ ಯಶೋಧರಂ ಪಿ |
ಟ್ಟಿನ ಕೋಟಿಯನಱಿದು ಕಱಿದು ನವಿಲೆಯ್ ಮೀನಾ ||
ಡಿನ ಪೋಂತು ಪೋಂತು ಕುಕ್ಕಟ |
ಮೆನೆ ಪುಟ್ಟಿಯುಮೀಗಳಭಯರುಚಿಯಾಗಿರ್ಪಂ || ೫೭

ನಿರವಿಸಿದ ಚಂದ್ರಮತಿಯೆಂ |
ಬರಸಿಯೆ ನಾಯುರಗಿ ಮೊಸಳೆಯಾಡು ಲುಲಾಯಂ ||
ಚರಣಾಯುಧವಧುವಾಗಿಯೆ |
ಗುರುವಚನದಿನೀಗಳಭಯಮತಿಯಾಗಿರ್ಪಳ್ || ೫೮

---

೫೫. ನಿನ್ನ ಪಿತಾಮಹ ವೀರತಪಸ್ವಿಯಾಗಿದ್ದ ಯಶೌಘಮಹಾರಾಜನು ತಪಶ್ಚರಣಮಾಡಿ ಸತ್ತು ಸ್ವರ್ಗದಲ್ಲಿ ದೇವಸ್ತ್ರೀಯರ ಕಡೆಗಣ್ಣಿನ ನೋಟವೆಂಬ ಕನ್ನೈದಿಲೆಗೆ ಚಂದ್ರಪ್ರಾಯನಾದ ದೇವನಾಗಿ ಹುಟ್ಟಿರುವನು (ಸ್ವರ್ಗಸ್ತ್ರೀಯರಲ್ಲಿ ಸುಖಪಡುತ್ತಿರುವನು).

೫೬. ನಿನ್ನ ತಾಯಿ ಅಮೃತಮತಿಯು ಅಷ್ಟವಂಕನಿಗೆ ಮನಸೋತು (ಮೋಹಗೊಂಡು) ತನ್ನ ಅತ್ತೆಯನ್ನೂ ಗಂಡನನ್ನೂ ವಿಷದಿಂದ ಕೊಂದು ಕಷ್ಟದಿಂದ ಬಹುಕಾಲಬದುಕಿ ವೃದ್ಧಳಾಗಿ ಮೃತ್ಯುವಶಳಾಗಿ ಹೋಗಿ ಧೂಮಪ್ರಭೆಯೆಂಬ ಐದನೆಯ ನರಕದಲ್ಲಿ ಹುಟ್ಟಿವಳು.

೫೭. ನಿನ್ನ ತಂದೆ ಯಶೋಧರನು ಹಿಟ್ಟಿನ ಕೋಳಿಯನ್ನು ಕೊಂದು ಸತ್ತು ನವಿಲು, ಮುಳ್ಳುಹಂದಿ, ಮೀನು, ಹೋತ ಮತ್ತೆ ಹೋತ ಬಳಿಕ ಕೋಳಿಯಾಗಿದ್ದು ಸತ್ತು ಈಗ ನಿನಗೆ ಅಭಯರುಚಿಯೆಂಬ ಮಗನಾಗಿರುವನು.

೫೮. ನಿಮ್ಮ ತಂದೆಯಿಂದಾ ಪಾಪಕಾರ್ಯವನ್ನು ಮಾಡಿಸಿದ ತಾಯಿ ಚಂದ್ರಮತಿರಾಣಿಯು ಸತ್ತು ನಾಯಿ, ಹಾವು, ಮೊಸಳೆ, ಆಡು, ಕೋಣ ಕೊನೆಗೆ ಹೆಣ್ಣುಕೋಳಿಯಾಗಿದ್ದು ಗುರುವಚನದ ವ್ರತಗ್ರಹಣಶಕ್ತಿಯಿಂದ ನಿನಗೆ ಅಭಯಮತಿಯೆಂಬ ಮಗಳಾಗಿರುವಳು.

ನಿನಗಂ ಕುಸುಮಾವಳಿಗಂ ।
ಜನಿಯಿಸಿದಮಳೆಂಬುವಭಯರುಚಿಮತಿಗಳ್ ಮು ॥
ನ್ನಿನ ಜನ್ಮಮನಿತುಮಂ ನೆ ।
ಟ್ಟನೆ ಬಲ್ಲರ್ ಕೇಳ್ದು ನಂಬು ನೀಂ ಧರಣಿಪತೀ ॥ ೪೯

ನೀನಱಿವೆ ಕೊಂದ ಘೋರಮು ।
ನಾನಿಗ್ರಹವಧೆಯಿನಂದು ಸತ್ತವರಱಿವರ್ ॥
ಮೀನುಂ ಮೊಸಳೆಯುಮಾಡಂ ।
ತಾ ನೆಗಟ್ದಜಪೋತ ಮಹಿಷಮಾದಂದರರಸಾ ॥ ೫೦

ಕೋೞಿಯ ಕೂಗೆತ್ತಲ್ನೀಂ ।
ಕೇೞಱಿದವನಿಸುವುದೆತ್ತಲಾ ಖಗಯುಗಳಂ ॥
ಬೀೞಲೊಡನಾದ ಮಾನಸ ।
ವಾೞೆತ್ತಲ್ ನೋಡ ಧರ್ಮವೊದವಿದ ಪದಮಂ ॥ ೫೧

ಎನೆ ಮುನಿವಚನದೊಳಂ ನಂ ।
ದನರೊಳಮಾಗಳೆ ಯಶೋಮತಿಕ್ಷಿತಿಪತಿ ತೆ ॥
ಳ್ಪನೆ ತಿಳಿದು ಭಾಪು! ಸಂಕ ।
ಲ್ಪನವಧೆಗಿನಿತಾಯ್ತು ದಿಟದೊಳೇನೇನಾಗರ್ ॥ ೫೨

---

೪೯. ಈಗ ನಿನಗೆ ಅವಳಿಮಕ್ಕಳಾಗಿ ಹುಟ್ಟಿರುವ ಅಭಯರುಚಿ ಅಭಯಮತಿಯರು ತಮಗೆ ಈ ಮೊದಲುಂಟಾಗಿದ್ದ ಎಲ್ಲಾ ಜನ್ಮಗಳನ್ನೂ ನೇರವಾಗಿ ತಿಳಿದಿರುವರು. ನೀನು ಈ ವಿಷಯವನ್ನು ಅವರನ್ನು ಕೇಳಿ ತಿಳಿದಾದರೂ ನಂಬು.

೫೦. ಎಲೆ ರಾಜನೆ! ಅಂದು ಅವರು ನಿಗ್ರಹವಧೆಯನ್ನು ಮಾಡಿ ಸತ್ತು ಮೀನು, ಮೊಸಳೆ, ಆಡು, ಹೋತ ಎಮ್ಮೆಗಳಾಗಿ ಹುಟ್ಟಿ ಪಟ್ಟಕಷ್ಟವನ್ನು ಅವರು ತಿಳಿದಿರುವರು. ಅದನ್ನು ಕೇಳಿ ನೀನು ಕೊಲೆಯಿಂದಾಗುವ ಘೋರವಾದ ಫಲವನ್ನು ತಿಳಿಯುವೆ.

೫೧. ಆ ಕೋಳಿಗಳ ಕೂಗು ಎತ್ತ (ಎಲ್ಲಿ)? ನೀನ್ನು ಆ ಶಬ್ದದಜಾಡನ್ನರಿದು ಬಾಣದಿಂದ ಹೊಡೆದುದೆತ್ತ (ಎಲ್ಲಿ)? ಆ ಪಕ್ಷಿ (ಕೋಳಿ) ಗಳೆರಡೂ ಸತ್ತಬಳಿಕ ಮನುಷ್ಯರೂಪದಲ್ಲಿ ಹುಟ್ಟಿದುದೆತ್ತ (ಎಲ್ಲಿ)? ಆದ್ದರಿಂದ ಧರ್ಮವು ಉಂಟುಮಾಡಿಕೊಟ್ಟ (ಒದಗಿಸಿದ) ಹದವನ್ನು (ಉತ್ತಮಸ್ಥಿತಿಯನ್ನು) ನೋಡು?

೫೨. ಎಂದ ಮುನಿಯ ಮಾತನ್ನು ಕೇಳಿದ ರಾಜನು ಮುನಿಯ ಮಾತಿನಂತೆ

ಎನಿತೊಳವು ಜೀವರಾಶಿಗ |
ಳನಿತುಮನೋರಂತೆ ಕೊಂದು ತಿಂದುಂ ತಣಿವಿ ||
ಲ್ಲೆನೆ ಬಾೞ್ದೆನಿಂದುವರೆಗಂ |
ಎನಗಿನ್ನೆಂತಪ್ಪ ನರಕಮಿದಿರ್ವಂದಪುದೋ || ೬೩

ಎಂದು ಸುದತ್ತಾಚಾರ್ಯರ |
ಮುಂದಣಿನರಮನೆಗೆ ಪೋಗದುರ್ವೀಭರಮಂ ||
ನಂದನನೊಳಭಯರುಚಿಯೊಳ್ |
ಸಂದಿಸಿ ತಾಂ ಜೈನದೀಕ್ಷೆಯಂ ಕೈಕೊಂಡಂ || ೬೪

ಆಗಳ್ ತಂದೆಯ ತಪದು |
ದ್ಯೋಗಂ ತಡವಾಗದಂತೊಡಂಬಟ್ಟು ಮಹೀ ||
ಭಾಗಕ್ಕನುಜ ಯಶೋಧರ |
ನಾಗಿರೆ ಬೞಿಕಭಯರುಚಿಯುಮನುಜೆಯು ಸಹಿತಂ || ೬೫

ಶ್ರೀಜಿನದೀಕ್ಷೆಗೆ ತನುವಂ |
ಯೋಜಿಸೆ ಕಲ್ಯಾಣಮಿತ್ರನುಂಬೆರಸು "ಯಥಾ ||
ರಾಜಾ ತಥಾ ಪ್ರಜಾ" ಯೆಂ |
ಬೋಜೆಯಿನಂದರಸುಗಳ್ ಪಲರ್ತಱಿಸಂದರ್ || ೬೬

---

ತನ್ನ ಮಕ್ಕಳುಗಳನ್ನು ಕೇಳಿ ಎಲ್ಲವನ್ನೂ ಸ್ಪಷ್ಟವಾಗಿ ತಿಳಿದು ಭಲರೆ! ಸಂಕಲ್ಪ ವಧೆಗೇ ಇಷ್ಟಾದರೆ (ಕೋಳಿಯನ್ನು ಕೊಲ್ಲುವೆನೆಂಬ ಭಾವಕ್ಕೇ) ನಿಜವಾಗಿ ಕೊಂದವರು ಏನೇನಾಗಿ ಹುಟ್ಟಲಾರರು ?

೬೩. "ಎಷ್ಟುವಿಧವಾದ ಜೀವರಾಶಿಗಳಿವೆಯೋ ಅವೆಲ್ಲವನ್ನೂ ಒಂದೇಸಮನಾಗಿ ಕೊಂದು ತಿಂದು ಇಂದಿಗೂ ತೃಪ್ತನಾಗದೆ ಬದುಕಿರುವ ನನಗೆ ಇನ್ನೆಂತಹನರಕ ಎದುರಾಗುವುದೋ ? ( ನರಕಸಿಕ್ಕುವುದೋ ? ) "

೬೪. ಹೀಗೆಂದು ಯೋಚಿಸುತ್ತ ಆ ಯಶೋಮತಿಯು ಸುದತ್ತಾಚಾರ್ಯರ ಮುಂದುಗಡೆಯಿಂದ ಅರಮನೆಗೆ ಹೋಗದೇ ತನ್ನ ರಾಜ್ಯಭಾರವನ್ನು ಮಗನಾದ ಅಭಯುರುಚಿಯಲ್ಲಿರಿಸಿ ತಾನು ಜಿನದೀಕ್ಷೆಯನ್ನು ಸ್ವೀಕರಿಸಿದನು.

೬೫. ಯಶೋಮತಿಯು ತನ್ನ ಸ್ನೇಹಿತನಾದ ಕಲ್ಯಾಣಮಿತ್ರನೊಡನೆ ದೀಕ್ಷೆಗೊಂಡುದನ್ನುನೋಡಿ "ಯಥಾರಾಜಾ ತಥಾ ಪ್ರಜಾ"( ರಾಜನಂತೆ ಪ್ರಜೆಗಳು) ಎಂಬರೀತಿಯಲ್ಲಿ ಅನೇಕ ಸಾಮಂತ ರಾಜರುಗಳೂ ದೀಕ್ಷೆಗೊಳ್ಳಲು ನಿಶ್ಚಯಿಸಿದರು (ವೈರಾಗ್ಯವನ್ನುಹೊಂದಿ ದೀಕ್ಷೆಗನುವಾದರು).

೬೬-೬೭. ತಂದೆಯ ದೀಕ್ಷಾಗ್ರಹಣವು ( ತಪಸ್ಸಿನಕಾರ್ಯವು) ವಿಳಂಬವಾಗದಂತೆ

ಕ್ರಮದಿಂದಂ ಪೊರಮಟ್ಟು ।
ತ್ತಮಚಾರಿತ್ರದೊಳೆ ನೆರೆದು ಮೆಯ್ಯಿಕ್ಕಿದ ಸಂ ॥
ಯಮದೆ ಸುದತ್ತಾಚಾರ್ಯರ ।
ಸಮುದಾಯದೊಳಿರ್ದು ತತ್ತ್ವಪರಿಣತರಾದರ್ ॥ ೬೭

ಆನಭಯರುಚಿಕುಮಾರನೆ ।
ಈನೆಗಟ್ಟಿರ್ದಭಯಮತಿಯಾಯಕ್ಕನೆ ದಲ್ ॥
ನಾನಾವಿಧಕರ್ಮದಿನಿ ।
ನ್ನೇನಂ ನೀಂ ಕೇಳ್ವೆ ಮಾರಿದತ್ತನೃಪಾಲಾ ॥ ೬೮

ಗುರುವಿಂದು ಬೆಸಸೆ ಭಿಕ್ಷೆಗೆ ।
ಬರುತಿರೆ ಪಿಡಿತಂದರೆಮ್ಮನಾದೆಸೆಗೆ ಭಯಂ ॥
ಪುರುಳಿಲ್ಲ ನಿನ್ನ ಕೇಡಂ ।
ಪರೀಕ್ಷಿಸೈ ಕರುಣದಿಂದೆ ತಲ್ಲಣಿಸಿದಪೇಂ ॥ ೬೯

---

(ತಾನೇ ರಾಜ್ಯವನ್ನು ಸ್ವೀಕರಿಸಲು) ಒಪ್ಪಿಕೊಂಡ ಅಭಯರುಚಿಯು, ಬಳಿಕ ರಾಜ್ಯಕ್ಕೆ ತನ್ನಿಂದ ಮುಂದೆ ರಾಜನಾಗುವವನಾದ ತಮ್ಮ ಯಶೋಧರನನ್ನು ರಾಜ್ಯದಲ್ಲಿರಿಸಿ ತಾನು ತನ್ನ ತಂಗಿಯುಸಹಿತ ಹೊರಟು ಉತ್ತಮವಾದ ಚಾರಿತ್ರ (ನಡತೆ-ವ್ರತ) ದಲ್ಲಿ ನಡೆದು ತನಗೊದಗಿದ ತಪಸ್ಸಿನಿಂದ ಸುದತ್ತಾಚಾರ್ಯರ ಸಂಘದೊಳಗಿರುತ್ತ ಎಲ್ಲಾ ತತ್ತ್ವಗಳನ್ನೂ ತಿಳಿದವನಾದನು.

೬೮. ಹೀಗೆ ತತ್ತ್ವಗಳನ್ನು ತಿಳಿದ ನಾನಾವಿಧವಾದ ಕರ್ಮಗಳಿಂದುಂಟಾದ ಆ ಅಭಯರುಚಿಕುಮಾರನೆಂಬುವನೇ ನಾನು, ಆ ಅಭಯಮತಿಯೇ ಇವಳು ನಿಶ್ಚಯ. ರಾಜನೆ! ನೀನು ಇನ್ನೇನನ್ನು ಕೇಳಬೇಕೆಂದಿರುವೆ ? ಎಂದು ಅಭಯರುಚಿಯು ಮಾರಿದತ್ತನನ್ನು ಪ್ರಶ್ನೆಮಾಡಿದನು.

೬೯. ನಮ್ಮ ಗುರುಗಳ ಅಪ್ಪಣೆಯಂತೆ ಇಂದು ಭಿಕ್ಷೆಗೆ ಬರುತ್ತಿದ್ದ ನಮ್ಮನ್ನು ಹಿಡಿದುತಂದಿರುವರು. ಬಲಿಗೊಡುವರೆಂಬ ಭಯವೇನೂ ಅಷ್ಟು ದೊಡ್ಡದಲ್ಲ. (ಭಯವನ್ನೇನೂ ಮುಖ್ಯವೆಂದೆಣಿಸಿಲ್ಲ.) ಆದರೆ ಇದರಿಂದ ನಿನಗುಂಟಾಗಬಹುದಾದ ಕೇಡನ್ನು (ಹಿಂಸೆಯಿಂದುಂಟಾಗುವ ದೋಷ) ಪರೀಕ್ಷಿಸು. (ಪರ್ಯಾಲೋಚಿಸು.) ಈ ಹಿಂಸೆಯಿಂದ ನಿನಗುಂಟಾಗುವ ಕೇಡನ್ನು ನೋಡಿ ಭಯದಿಂದ ತಲ್ಲಣಿಸುತ್ತಿರುವೆನು. ಈ ಬಗೆಯ ಕೊಲೆಯನ್ನು ನಿಲ್ಲಿಸು.

ಸಂಕಲ್ಪಹಿಂಸೆಯೊಂದಱಿೊ ।
ಳಾಂ ಕಂಡೆಂ ಭವದ ದುಃಖಮುಂಡೆಂ ನೀಂ ನಿಃ ॥
ಶ್ಶಂಕತೆಯಿನಿನಿತು ದೇಹಿಗ ।
ಳಂ ಕೊಂದಪೆ ನರಕದೊಳ್ ನಿವಾರಣೆವಡೆವೈ ॥ ೭೦

ಎಂಬ ನುಡಿ ನೆರೆದ ಜೀವಕ ।
ದಂಬಂಗಳಭಯಮೆಂಬ ಡಂಗುರದವೊಲೊ ॥
ಪ್ಪಂ ಬಡೆಯೆ ಮಾರಿದತ್ತ ನೃ ।
ಪಂ ಬಿಲ್ಲಂಬೆಱಗುಮಾದನುದ್ವೇಗಪರಂ ॥ ೭೧

ಆ ಚಂಡಮಾರಿ ಲೋಚನ ।
ಗೋಚರತನುವಾಗಿ ಕುವರನಂ ಬಂದಿಸಿ ನೀ ॥
ನಾಚಾರ್ಯನೆಯೆಂದಿಂತಿರೆ ।
ಸೂಚಿಸಿದಳ್ ನೆರೆದ ಜಾತ್ರೆ ನೆಱೆ ಕೇಳ್ವಿನೆಗಂ ॥ ೭೨

ಪ್ರಜೆಯೆಲ್ಲಂ ಜಲಗಂಧ ।
ಸ್ರಜತಂಡುಲಧೂಪದೀಪಚರುತಾಂಬೂಲ ॥
ವ್ರಜದಿಂ ಪೂಜಿಸುವುದು ಜೀ ।
ವಜಾತದಿಂದೆನಗೆ ಬಲಿಯನಿತ್ತೊಡೆ ಮುನಿವೆಂ ॥ ೭೩

---

೭೦. ಒಂದು ಸಂಕಲ್ಪಹಿಂಸೆಮಾಡಿದುದರಿಂದಲೇ ನಾನು ಇಷ್ಟು ಭವಗಳನ್ನೆತ್ತಿ (ಇಷ್ಟು ಜನ್ಮಗಳಲ್ಲಿ ಹುಟ್ಟಿ) ಬಹಳವಾಗಿ ದುಃಖವನ್ನುಂಡೆನು (ಅನುಭವಿಸಿದೆನು). ಹೀಗಿರುವಾಗ ನೀನು ಇಷ್ಟೊಂದು ಪ್ರಾಣಿಗಳನ್ನು ನಿಃಶಂಕೆಯಿಂದ (ನಿರ್ಭೀತಿಯಿಂದ–ಹಿಂದುಮುಂದು ಯೋಚಿಸದೆ) ಕೊಲ್ಲುತ್ತಿರುವೆ. ಇವರ ಪರಿಣಾಮವನ್ನು ನೀನು ನರಕದಲ್ಲಿ ಕಾಣುವೆ. (ಇದಕ್ಕೆ ನಿವಾರಣೆ-ಪ್ರತಿಫಲವನ್ನು ನರಕದಲ್ಲಿ ಹೊಂದುವೆ).

೭೧. ಹೀಗೆಂದ ಆ ಅಭಯರುಚಿಯ ಮಾತು ಅಲ್ಲಿ ಸೇರಿದ್ದ ಜೀವಸಮೂಹಗಳಿಗೆ ಅಭಯವೆಂಬ ಡಂಗುರದಂತೆ ಕಿವಿಗಿನಿದಾಗಲು (ಭಯವಿಲ್ಲವೆಂದು ಡಂಗುರಹುಯಿದಂತೆ ತೋರಲು) ಮಾರಿದತ್ತರಾಜನು ತನಗಾಗಬೇಕಾಗಿದ್ದ ಪಾಪವನ್ನು ಕುರಿತು ಆಶ್ಚರ್ಯವನ್ನುಹೊಂದಿ ಸ್ತಬ್ಧನಾಗಿ ನಿಂತನು.

೭೨-೭೩. ಆಗ ಚಂಡಮಾರಿದೇವತೆಯೂ ಕೂಡ ಪ್ರತ್ಯಕ್ಷಳಾಗಿ ಕಾಣಿಸಿಕೊಂಡು (ನಿಜರೂಪದಿಂದ ಕಾಣಿಸಿಕೊಂಡು) ಆ ಅಭಯರುಚಿಕುಮಾರನಿಗೆ ನಮಸ್ಕಾರಮಾಡಿ "ನೀನೇ ನನಗೆ ಧರ್ಮೋಪದೇಶಮಾಡಿದ ಗುರುವು" ಎಂದು ಹೇಳಿ, ಅಲ್ಲಿ ನೆರೆದಿದ್ದ ಜನರೆಲ್ಲರೂ ಕೇಳುವಂತೆ "ಜನರೆಲ್ಲರೂ (ಇನ್ನು

ಎಂದು ತಿರೋಹಿತೆಯಾದೊಡೆ ।
ತಂದಿರಿಸಿದ ಜೀವರಾಶಿಯಂ ಬಿಡಿಸಿ ಜನಾ ॥
ನಂದನರಂ ತನ್ನನುಜೆಯ ।
ನಂದನರಂ ಮಾರಿದತ್ತವಿಭು ಲಾಲಿಸಿದಂ ॥ ೭೪

ಗುಡುಗುಡನೆ ಸುರಿವ ಕಣ್ಬನಿ ।
ಯೊಡವಂದ ಶುಭಕ್ಕೆ ಮಂಗಳಸ್ನಾನಮನಂ ॥
ದೊಡರಿಸೆ ಸೋದರಶಿಶುಗಳ ।
ನೊಡಲೊಳಗಡಗುವಿನಮಪ್ಪಿ ಬೆಚ್ಚನೆ ಸುಯ್ದಂ ॥ ೭೫

ತಾನಿಂದುವರೆಗವೊದವಿಸಿ ।
ದೇನಂಗಳ್ಗಳ್ಕಿ ಕುಸುಮದತ್ತಂಗೆ ಧರಿ ॥
ತ್ರೀನಾಥಪದವಿಯಂ ಕೊ ।
ಟ್ಟಾ ನರಪತಿ ಬಟಿ್ಕ ದೀಕ್ಷೆಯಂ ಕೈಕೊಂಡಂ ॥ ೭೬

ಕೆಲಕಾಲಮುಗ್ರತಪಮಂ ।
ಸಲಿಸಿ ಸಮಾಧಿಯೊಳೆ ಮುಡಿಪಿ ಮೂಜನೆಯ ದಿವಂ ॥
ನೆಲೆಯಾಗೆ ಮಾರಿದತ್ತಂ ।
ಕಲಿಯಂ ಮೂದಲಿಸಿದಂತೆ ದೇವನೆಯಾದಂ ॥ ೭೭

---

ಮುಂದೆ) ನನ್ನನ್ನು ಜಲ ಗಂಧ ಪುಷ್ಪ ದೀಪ ಧೂಪ ಚರು ತಾಂಬೂಲಾದಿ ಗಳಿಂದ ಪೂಜಿಸತಕ್ಕದ್ದು. ಪ್ರಾಣಿಗಳನ್ನೇನಾದರೂ ಬಲಿಗೊಟ್ಟರೆ ನಾನು ಕೋಪಿಸಿಕೊಳ್ಳುವೆನು."

೭೪. ಎಂದು ಹೇಳಿ ಅದೃಶ್ಯೆಯಾದಳು (ಮರೆಯಾದಳು). ಆಗ ಮಾರಿ ದತ್ತರಾಜನು ಬಲಿಗೆಂದು ತಂದು ಸೇರಿಸಿಕೊಂಡಿದ್ದ ಪ್ರಾಣಿಗಳೆಲ್ಲವನ್ನೂ ಬಿಡಿಸಿದನು. ತನ್ನ ತಂಗಿ ಕುಸುಮಾವಳಿಯ ಮಕ್ಕಳಾದ ಆ ರಾಜಕುಮಾರ ರನ್ನು ಪ್ರೀತಿಯಿಂದನೋಡಿದನು.

೭೫. ಗುಡುಗುಡನೆ ಸುರಿಯುತ್ತಿದ್ದ ಕಣ್ಣೀರೇ ಬಂದೊದಗಿದ್ದ ಅಶುಭಪರಿ ಹಾರಕ್ಕಾಗಿ ಮಾಡುವ ಮಂಗಳಸ್ನಾನದಂತಾಗಲು ಆ ರಾಜನು (ಮಾರಿದತ್ತ) ತನ್ನ ತಂಗಿಯ ಮಕ್ಕಳನ್ನು ಹೊಟ್ಟೆಯೊಳಗಿಟ್ಟುಕೊಳ್ಳುವಂತೆ ಬಲವಾಗಿ ತಬ್ಬಿಕೊಂಡು ನಿಟ್ಟುಸಿರುಬಿಟ್ಟನು.

೭೬. ತಾನು ಅಲ್ಲಿಯವರೆಗೆ ಮಾಡಿದ್ದ ಪಾಪಗಳಿಗಾಗಿ ಭಯಗೊಂಡು (ತನ್ನ ಮಗ) ಕುಸುಮದತ್ತನೆಂಬುವನಿಗೆ ರಾಜಪದವಿಯನ್ನುಕೊಟ್ಟು ಬಳಿಕ ದೀಕ್ಷೆ ಯನ್ನು ಕೈಗೊಂಡನು.

೭೭. ಮಾರಿದತ್ತನು ಕೆಲವುಕಾಲದವರೆಗೆ ಕಠಿನವಾದ ತಪಸ್ಸನ್ನುಮಾಡಿ

ಅಮಳ್ಗಳ್ ಬಳಿಕ ಸುದತ್ತರ |
ಸಮುದಾಯದೊಳಾಗಮೋಕ್ತಿಯಿಂ ನಡೆದು ತಪಂ ||
ತಮಗೆವರೆ ನೋಂತು ಮುಡಿಪಿದ |
ಸಮಯದೊಳೀಶಾನಕಲ್ಪದೊಳ್ ಜನಿಯಿಸಿದರ್ || ೭೮

ಮತ್ತಂ ಧರ್ಮವಿಹಾರನಿ |
ಮಿತ್ತಂ ಬಂದಿರೆ ಯಶೋಧರಂ ತಮ್ಮವರ್ಗಾ ||
ದುತ್ತಮಗತಿಯಂ ಕೇಳ್ದು ಸು |
ದತ್ತಾಚಾರ್ಯರ ಪದಂಗಳಂ ಪೂಜಿಸಿದಂ || ೭೯

ಜೀವದಯೆಯೆಂಬುದೆಮ್ಮಯ |
ಮಾವನ ಪೆಸರಿರ್ದ ನಾಡೊಳಿರದಾತಂಗಂ ||
ದೇವಗತಿಯಾಯ್ತು ಸೋದರ |
ರ್ಗಾ ವೈಭವಮಾಯ್ತು ಧರ್ಮದಿಂದಾಗದುದೇಂ || ೮೦

---

ಸಮಾಧಿವಿಧಾನದಿಂದ ಸತ್ತು ಮೂರನೆಯ ಸ್ವರ್ಗದಲ್ಲಿ ಕಲಿಕಾಲವನ್ನು ಹಾಸ್ಯಮಾಡುವವನಂತೆ (ತನ್ನ ಪಾಪಗಳನ್ನು ಅಪಹಾಸ್ಯಮಾಡುವಂತೆ) ದೇವನಾಗಿ ಹುಟ್ಟಿದನು.

೭೮. ಆ ಅವಳಿಮಕ್ಕಳು (ಅಭಯರುಚಿ ಅಭಯಮತಿಯರು) ಸುದತ್ತಾಚಾರ್ಯರ ಸಂಘದಲ್ಲಿದ್ದುಕೊಂಡು ಶಾಸ್ತ್ರವಿಧಿಯಂತೆ ತಪಸ್ಸನ್ನುಮಾಡಿ ಆರಾಧನಾವಿಧಿಯಿಂದ ಸತ್ತು ಒಡನೆಯೇ ಈಶಾನಕಲ್ಪವೆಂಬ ಸ್ವರ್ಗದಲ್ಲಿ ಹುಟ್ಟಿದರು.

೭೯. ಕೆಲವುಕಾಲದ ಬಳಿಕ ಧರ್ಮವಿಹಾರಾರ್ಥವಾಗಿ ಬಂದಿದ್ದ ಯಶೋಧರ ರಾಜನು (ಎರಡನೆಯವನು) ಸುದತ್ತಾಚಾರ್ಯರಿಂದ ತಮ್ಮವರಿಗಾದ (ಸೋದರಮಾವ, ತಂದೆ, ಅಜ್ಜಿ) ಸದ್ಗತಿಯ ವಿಚಾರವನ್ನೆಲ್ಲಾ ಕೇಳಿ ಅವರ ಪಾದಗಳನ್ನು ಪೂಜಿಸಿದನು.

೮೦. "ಜೀವದಯೆಯೆಂಬುದೇ ನಮ್ಮ ಮಾವನ (ಮಾರಿದತ್ತನ) ದೇಶದಲ್ಲಿ ಇರಲಿಲ್ಲ. ಅಂತಹವನಿಗೂ ದೇವಗತಿಯಾಯಿತು. ನನ್ನ ಸಹೋದರರಿಗೆ ಅಂತಹ ವೈಭವದಿಂದಕೂಡಿದ ಗತಿಯಾಯಿತು. ಎಂದಮೇಲೆ ಧರ್ಮದಿಂದ ಆಗಲಾರದಿರುವದೇನಿದೆ ?"

ಎಂದು ಮನಸಂದು ಜಿನಮತ |
ನಂದನದೊಳ್ ದಾನಲತೆ ದಯಾರಸದೆ ಜಗಂ ||
ಹಂದರೆನೆ ಪರ್ವಿ ಪೊಸಜಸ |
ದಿಂದಡರುತ್ತಿರೆ ಯಶೋಧರಂ ಬೆಳೆಯಿಸಿದಂ || ೮೧

ತಾರಾತಾರಧರಾಧರ |
ತಾರಾದರತಾರಹಾರನೀಹಾರಪಯಃ ||
ಪೂರಹರಹಸನಶಾರದ |
ನೀರದನಿರ್ಮಲಯಶೋಧರಂ ಕವಿತಿಲಕಂ || ೮೨

ಸಜ್ಜನಚೂಡಾಮಣಿ ತ |
ಮ್ಮಜ್ಜಂಗಂ ಪುಣ್ಯದಿಂದೆ ಸಾಸಿರ್ಮಡಿಯಾ ||
ಗುಜ್ಜಳಿಕೆವಡೆದ ಪೆರ್ಮೆಯಿ |
ನುಜ್ಜೇನಿಯೊಳರಸುಗೆಯ್ದು ಪಾಲಿಸುತಿರ್ದಂ || ೮೩

|| ಮತ್ತೇಭವಿಕ್ರೀಡಿತ ||

ಕ್ಷಯಮಂ ಪಿಟ್ಟಿನ ಕೋೞಿಗಿತ್ತು ನವಿಲುಂ ನಾಯಾದರೆಯ್ಯಂ ವಿಷಾ |
ಹಿಯುಮಾದರ್ಪಗೆ ಸತ್ತು ಮೀನ್ಮೊಸಳೆಯಾದರ್ಪೋಂತುಮಾಡಾದರ |
ಲ್ಲಿಯೆ ಪೋಂತುಂ ಬಲುಗೋಣರಾದರೆರೆಡುಂ ಬಳ್ಕೋೞಿಯಾದರ್ತಹ |
ಸ್ಪಿಯ ಮಾತಿಂದಮುಳಾದರಲ್ತೆ ಮಗನುಂ ತಾಯುಂ ಯಶೌಘಪ್ರಿಯರ್ ||೮೪

---

೮೧. ಎಂದು ಮನಸ್ಸಿನಲ್ಲಿ ಮಾಡಿಕೊಂಡು, ಆ ಯಶೋಧರರಾಜನು ಜೈನ ಮತವೆಂಬ ವನದಲ್ಲಿ ದಾನವೆಂಬ ಲತೆಯು ದಯಾರಸವೆಂಬ ನೀರಿನಿಂದ ಜಗತ್ತನ್ನೇ ಚಪ್ಪರವನ್ನಾಗಿ ಮಾಡಿಕೊಂಡು ಹಬ್ಬಿ ತನ್ನ ನೂತನವಾದ ಯಶಸ್ಸಿನಿಂದಕೂಡಿ ವೃದ್ಧಿಹೊಂದುವಂತೆ ಬಳೆಯಿಸಿದನು (ಅಂದರೆ ಜೈನ ಧರ್ಮವನ್ನೂ, ದಯಾಭಾವವನ್ನೂ, ಅತಿಯಾಗಿ ಪ್ರಚಾರಮಾಡುತ್ತ ದಾನಿಯಾಗಿ ಒಳ್ಳೆಯ ಯಶಸ್ಸನ್ನು ಹೊಂದಿದ್ದನು).

೮೨. ಬೆಳ್ಳಿ, ಕೈಲಾಸಪರ್ವತ, ನಕ್ಷತ್ರ, ಮುತ್ತಿನಹಾರ, ಮಂಜು, ಕ್ಷೀರ ಸಮುದ್ರ, ಈಶ್ವರನ ನಗು, ಶರತ್ಕಾಲದ ಮೇಘ, ಇವುಗಳಂತೆ ನಿರ್ಮಲವಾದ ಕೀರ್ತಿಯನ್ನುಹೊಂದಿ ಕವಿತಿಲಕನಾದ ಆ ಯಶೋಧರರಾಜನು,

೮೩. ಸತ್ಪುರುಷರಿಗೆಲ್ಲಾ ಶ್ರೇಷ್ಠನಾಗಿ, ಪುಣ್ಯದಲ್ಲಿ ತಾತಗಿಂತಲೂ ಸಾವಿರದಷ್ಟು ಮೇಲಾದವನೆಂದು ಪ್ರಸಿದ್ಧಿವಡೆದು, ಅತ್ಯಂತಹೆಚ್ಚುಗಾರಿಕೆಯಿಂದ ಉಜ್ಜಯಿನಿಯಲ್ಲಿ ರಾಜ್ಯವಾಳುತ್ತಿದ್ದನು.

೮೪. ಆ ಯಶೌಘರಾಜನಿಗೆ ಪ್ರಿಯರಾದ ಹೆಂಡತಿಯೂ, ಮಗನೂ,

|| ಮಾ ಲಿ ನಿ ||

ಅಭಯರುಚಿಕುಮಾರಂ ಮಾರಿದತ್ತಂಗೆ ಹಿಂಸಾ ।
ರಭಸಮತಿಗೆ ಸೈಪಂ ಪೇಟ್ಟು ಧರ್ಮಕ್ಕೆ ತಂದೀ ।
ಶುಭಕಥನಮತ್ಯಾನಂದದಿಂ ಕೇಳ್ವ ಭವ್ಯ ।
ಪ್ರಭುಸಭೆಗೆಸೆದಿರ್ಕುಂ ಮಂಗಳ ಶ್ರೀವಿಳಾಸಂ ॥ ೮೫

|| ಚಂಪಕಮಾಲೆ ||

ಪರಮಜಿನೇಂದ್ರಶಾಸನವಸಂತದೊಳೀ ಕೃತಿಕೋಕಿಲಸ್ವನಂ ।
ಪರೆಗಸಹಾಯಶೂರನ ಭುಜಕ್ಕೆ ಜಯಂ ಸಮಸಲ್ಗೆ ಸಂತತಂ ।
ಪರಿಮಳದಂತೆ ವಾಣಿ ನೆಲಸಿರ್ಕೆ ವಿಕಾಸವಿಳಾಸದಂತೆವೊಲ್ ।
ಸಿರಿ ನೆಲಸಿರ್ಕೆ ನಾಡ್ಪ್ರಭುಜನಾರ್ದನದೇವನ ವಕ್ತ್ರಪದ್ಮದೊಳ್ ॥ ೮೬

---

ಹಿಟ್ಟಿನಕೋಳಿಯನ್ನುಕೊಂದು, ನವಿಲು ಮತ್ತು ನಾಯಾಗಿ, ಮುಳ್ಳು ಹಂದಿ ಮತ್ತು ಹಾವಾಗಿ ದ್ವೇಷದಿಂದ ಒಂದನ್ನೊಂದು ಕೊಂದು ಸತ್ತು ಮೀನು ಮತ್ತು ಮೊಸಳೆಯಾಗಿ, ಹೋತನು ಮತ್ತು ಆಡೂ ಆಗಿ, ಮತ್ತಲ್ಲಿಯೆ ಹೋತನು ಮತ್ತು ಕೋಣನಾಗಿ ಹುಟ್ಟಿ ಕೊನೆಗೆ ಕೋಳಿಗಳಾಗಿದ್ದು ಮುನಿಗಳ ಧರ್ಮಬೋಧೆಯಿಂದ ಮನುಷ್ಯರಾಗಿ ಅವಳಿಮಕ್ಕಳಾಗಿ ಹುಟ್ಟಿದರು.

೮೫. ಅಭಯರುಚಿಕುಮಾರನು ಹಿಂಸಾನಂದನಾಗಿದ್ದ ಮಾರಿದತ್ತನಿಗೆ ಪುಣ್ಯ ಕಥೆಯನ್ನು ಹೇಳಿ ಧರ್ಮಮಾರ್ಗಕ್ಕೆ ತಂದ ಈ ಶುಭಕಥನವನ್ನು ಸಂತೋಷದಿಂದ ಕೇಳುವ ಭವ್ಯರಾದ ರಾಜರಿಗೂ ಪ್ರಜೆಗಳಿಗೂ ಮಂಗಲವೂ ಸಂಪತ್ತೂ ಉಂಟಾಗಲಿ.

೮೬. ಈ ಕಾವ್ಯವು ಜೈನಶಾಸನ (ಧರ್ಮ) ವೆಂಬ ವಸಂತರುತುವಿಗೆ ಕೋಕಿಲ ಧ್ವನಿಯಂತೆ ಹರಿಯಲಿ. ಅಸಹಾಯಶೂರನಾದವನ (ಜನ್ನ) ಭುಜಕ್ಕೆ ಜಯವುಂಟಾಗಲಿ. ನಾಡಪ್ರಭುವಾದ ಜನಾರ್ಧನದೇವನ ಮುಖಪದ್ಮದಲ್ಲಿ ಪರಿಮಳದಂತೆ ಸರಸ್ವತಿಯು ಯಾವಾಗಲೂ ನೆಲಸಿರಲಿ. ಅರಳಿಕೆಯ ಸೊಬಗಿನಂತೆ ಲಕ್ಷ್ಮಿಯು ವಾಸವಾಗಿರಲಿ.

## ॥ ಉತ್ಪಲಮಾಲೆ ॥

ಶ್ರೀಗಿರಿದುರ್ಗಮಲ್ಲನೃಪರಾಜ್ಯದೊಳುತ್ಸವಮುತ್ತರೋತ್ತರ ।
ಕ್ಕಾಗಿರೆ ಶುಕ್ಲದಾಶ್ವಯುಜಕೃಷ್ಣದಪಂಚಮಿ ಪೂರ್ಣಪುಷ್ಯತಾ ।
ರಾಗುರುವಾಗೆ ಭೂತಳದೊಳೀಕೃತಿವೆತ್ತುದು ಸುಪ್ರತಿಷ್ಠೆಯಂ ।
ಚಾಗದದಾನದಗ್ಗಳಿಕೆಯಂ ಪಡೆದಂ ಕವಿಭಾಳಲೋಚನಂ ॥ ೮೭

ಇದು ಪರಮಜಿನಸಮಯಕುಮುದಿನೀಶರಚ್ಚಂದ್ರಚೈತ್ರ
ಚಂದ್ರಮ ಸದಮಳರಾಮಚಂದ್ರಮುನೀಂದ್ರಪ
ದಭಕ್ತಂ ಜಾನಕಿಮಾಡಿದ ಯಶೋ
ಧರಚರಿತದೊಳ್ ಉದಾರಂ
ಚತುರ್ಥಾವತಾರಂ

## ॥ ಗ್ರಂಥಂ ಸಮಾಪ್ತಂ ॥

---

೮೭. ಸಂಪದ್ಯುಕ್ತವಾದ ಗಿರಿದುರ್ಗಮಲ್ಲರಾಜನ (ವೀರಬಲ್ಲಾಳರಾಜ) ರಾಜ್ಯದಲ್ಲಿ ಉತ್ಸವವು ಉತ್ತರೋತ್ತರ ವೃದ್ಧಿಯಾಗುತ್ತಿರುವ ಶುಕ್ಲ ಸಂವತ್ಸರದ ಆಶ್ವಯುಜಮಾಸದ ಬಹುಳ ಪಂಚಮಿಯಲ್ಲಿ ಪೂರ್ಣವಾದ ಪುಷ್ಯ ನಕ್ಷತ್ರವುಳ್ಳ ಗುರುವಾರದಂದು ಈ ಕಾವ್ಯವು ಅತಿಯಾದ ಯಶಸ್ಸನ್ನೂ ಗೌರವವನ್ನೂ ಪಡೆಯಿತು. ಕವಿಭಾಳಲೋಚನನು ತ್ಯಾಗಿಯೂ ದಾನಿಯೂ ಆಗಿ ಅತಿಯಾಗಿ ವೃದ್ಧಿಹೊಂದಿದನು.

ಇದು ಜಿನಸಮಯ (ಮತ) ವೆಂಬ ಕನ್ನೈದಿಲೆಗೆ ಶರಚ್ಚಂದ್ರ ಚೈತ್ರಚಂದನಂತಿರುವ
ಪರಿಶುದ್ಧರಾದ ರಾಮಚಂದ್ರಮುನೀಂದ್ರರ ಪದಭಕ್ತನಾದ ಜಾನಕಿ
(ಜನ್ನ) ಯು ಮಾಡಿದ ಯಶೋಧರಚರಿತ್ರೆಯ
ಕರ್ಣಾಟಕಾನುವಾದದಲ್ಲಿ
ನಾಲ್ಕನೆಯ ಅವತಾರವು

## ಗ್ರಂಥವು ಮುಗಿದುದು



# ಶೋಧನ ಪತ್ರ

| ಪುಟ | | | |
|---|---|---|---|
| ೫ | ತಾ. | ೧೫ | ಅದಟರಾಯ ಕೋಳಾಹಳನಾ |
| ೧೦ | ತಾ. | ೩೨ | ಕೇತುಗಳಂ ಕೆಳೆ |
| ೧೧ | ತಾ. | ೩೬ | ಮಾತಿನಂತೆಯೂ |
| ೧೩ | ಕಂ. | ೪೦ | ಮಂಟಪದೆಡೆಯೊಳ್ |
| ೧೪ | ಕಂ. | ೪೨ | ಜೀವರಾಶಿ. |
| ೧೬ | ತಾ. | ೪೯ | ಪರೀಷಹ |
| ೧೬ | ತಾ. | ೪೯ | ಬದಲಾವಣೆಗಳನ್ನು |
| ೨೫ | ತಾ. | ೩ | ರಾಜ್ಯಲಕ್ಷ್ಮಿಯೋ |
| ೩೨ | ತಾ. | ೨೫ | ಪರವಶತೆಯಿಂದುಂಟಾದ ನಿದ್ರಾವಶತೆಯಿಂದ |
| ೩೩ | ಕಂ. | ೩೦ | ಡಾಳಂಬಡೆ |
| ೩೭ | ತಾ. | ೪೧ | ತಿರುಗಿಸಲಾರದೆ |
| ೩೭ | ಕಂ. | ೪೫ | ಮೆಚ್ಚಿದ |
| ೪೪ | ತಾ. | ೬೮ | ಜೈನಮುನಿಯೂ ಸ್ವೈರಿಸಲಾರನು |
| ೪೫ | ಕಂ. | ೭೦ | ಕಿತ್ತ್ರಡಮಂ |
| ೪೬ | ಕಂ. | ೭೨ | ರಭಸಮತಿಗೆ, ನತ್ಯಾನಂದದಿಂ |
| ೪೮ | ತಾ. | ೫ | ಭೂಪಾಲಕರೂ |
| ೬೭ | ಕಂ. | ೬೭ | ಜಾಯಿಲವು |
| ೬೯ | ತಾ. | ೭೩ | ಮನ್ಮಥನನ್ನು ಹೀಯಾಳಿಸುವಂತೆ |
| ೭೧ | ತಾ. | ೭೯ | ಶುಭಕಥನವನ್ನು |
| ೭೫ | ಕಂ. | ೧೦ | ಬೆಳತಿಗೆವಸದನ |
| ೭೫ | ಕಂ. | ೧೨ | ಮಿರ್ದಕಂಪನರೆಂಬರ್ |
| ೭೮ | ಕಂ. | ೧೯ | ಕಿಱಿಕಿಱಿದೆನೆಲುವಂ । |
| ೮೦ | ತಾ. | ೨೭ | ದರ್ಶನಜ್ಞಾನವೀರ್ಯ |
| ೮೭ | ಕಂ. | ೫೦ | ಎಂಬುದುಮುರಸಂ |